# ಅನ್ವೇಷಣೆ

ಸಂಚಿಕೆ
೫೨

ಸಾಹಿತ್ಯ ಸಂಸ್ಕೃತಿ ಕ



ವಿಶೇಷ :

ರಂಗ ಶಿಕ್ಷಣ ; ಪ್ರಶ್ನೋತ್ತರ -

ಉ. ಕ. ಜಿಲ್ಲೆ ೯೦ರ ಕಾವ್ಯ - ೧

ಪ್ರಗತಿಪರ
ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ
ಚಟುವಟಿಕೆಗಳಿಗೆ

ಸಂಪುಟ : ೧೧ ಮೇ–ಜೂನ್ : ೧೯೯೫ ಸಂಚಿಕೆ ೫೩



ಪತ್ರಿಕೆಗೆ ಚಂದಾ ಕಳುಹಿಸದ ಮಿತ್ರರು ದಯವಿಟ್ಟು ಕಳುಹಿಸಿ ಬರೆಯಿರಿ.

—ಸಂಪಾದಕ

* 'ಅನ್ವೇಷಣೆ' ಸಾಹಿತ್ಯ – ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ದ್ವೈಮಾಸಿಕ.
* ಪ್ರಕಟಣೆಗೆ ಕಳುಹಿಸುವ ಲೇಖನ, ವಿಮರ್ಶಾ ಬರಹ, ಕವನಗಳನ್ನು ಆದಷ್ಟು ಟೈಪು ಮಾಡಿ ಕಳುಹಿಸಿ.
* ಅಪ್ರಕಟಿತ ಬರಹ ವಾಪಸ್ಸು ಬೇಕಿದ್ದರೆ ಸಾಕಷ್ಟು ಅಂಚೆ ಚೀಟಿ ಇರಿಸಿ.
* ವಿಳಾಸ ಬದಲಾದರೆ ದಯವಿಟ್ಟು ತಿಳಿಸಿ
* ಚಂದಾ ಹಣವನ್ನು ಎಂ.ಓ. ಇಲ್ಲವೆ ಡಿ.ಡಿ. ಮೂಲಕ ಕಳುಹಿಸಿ. ಚೆಕ್ ಕಳುಹಿಸುವಾಗ ರೂ. ೫–೦೦ ಹೆಚ್ಚು ಕಳುಹಿಸಿ.
* ವಾ. ಚಂದಾ ರೂ. ೫೦–ವ್ಯಕ್ತಿಗಳಿಗೆ ರೂ. ೭೦–ಸಂಸ್ಥೆ/ಗ್ರಂಥಾಲಯ.

ವಿಳಾಸ :
ಸಂಪಾದಕ, ಅನ್ವೇಷಣೆ
೩೭/೨ಎ, 'ನಿಸರ್ಗ' ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು–೫೬೦ ೦೪೦

## ಈ ಸಂಚಿಕೆಯಲ್ಲಿ

## ೧ ಒಂದು ನೃತ್ಯ ಗೀತೆ

ರಕ್ತ ತೊಟ್ಟಿಕ್ಕುತ್ತಿರುವ ಅದ್ಯಾವುದೋ ಕೈಯಿ
ಬರೆ ಬರೆದು ಕೊಡುತ್ತಿದೆ ಕೊಕ್ಕರೆ ಬಿಳೀ ಕಾಗದದ ಮೇಲೆ
ಇನ್ನೂ ಜೀವ ಹಿಡಕೊಂಡಿರುವ ನಗರ ನಾಡುಗಳನ್ನು
ಎಮಕೆ ಚಕ್ಕಳವಾದ ಕೋಟ್ಯಾನುಕೋಟಿ ಪ್ರೇತಾತ್ಮರನ್ನು

ನಾವೋ
ಕಡೆಯ ಕಂಬನಿ ಸುರಿಸಿ
ಈ ಇಡೀ ಇತಿಹಾಸಕ್ಕಿಂತಾ ನೀಳವಾದ ನಿಟ್ಟುಸಿರಿಟ್ಟು
ಬೀಳ್ಕೊಡುತ್ತಿದ್ದೇವೆ
ಪ್ರೊಮಿಥ್ಯೂಸ್‌ನ ಕಡೆಯ ವಂಶಜರನ್ನು

ಅಗೋ
ಆರಿ ಹೋಗುತ್ತಿವೆ ಒಂದೊಂದಾಗಿ ಒಂದೊಂದಾಗಿ
ನಾಗರೀಕತೆಯ ನೂರು ದೀಪಗಳು
ಇಗೋ
ಹತ್ತಿಕೊಳ್ಳುತ್ತಿವೆ ಒಂದೊಂದಾಗಿ
ಬರ್ಬರತೆಯ ಕ್ರೂರ ಪಂಜುಗಳು

'ಕೇಳಿ ಮಂಗಳ ವಾದ್ಯ,
ಇನ್ನೇನು ಬದಲಾಗಿಯೇ ಹೋದ ಆ ಸೂರ್ಯ'
ಹೀಗೆಂದು ಕನಸಲ್ಲಿ ಬಂದು
ಪಿಸುಗುಡುತ್ತಿದ್ದ ಆ ಬಂಧು
ಇವತ್ತು ಹೀಗಂದ :
'ಸೂರ್ಯ ಬದಲಾಗಲೇ ಇಲ್ಲ
ಇರುವ ಸೂರ್ಯನಿಗೆ ಹೊಂದಿಕೊಳ್ಳದೇ ಬೇರೆ ದಾರಿಯಿಲ್ಲ!'

ಹೂತು ಹಾಕಿದ್ದೇವೆ ಕಟ್ಟಕಡೆಯ ಕನಸುಗಳನ್ನು
ಉಳಿದ ಸಣ್ಣಪುಟ್ಟ ಆಸೆಗಳನ್ನೆಲ್ಲಾ ಸುಟ್ಟು

ಬೂದಿ ಮಾಡಿ ಮೈಗೆಲ್ಲಾ ಬಳಕೊಂಡು
ಕುಂತುಕೊಂಡಿದ್ದೇವೆ ಅತ್ಯಾಧುನಿಕ ಮಷಾಣಗಳಲ್ಲಿ
ಭೂತನಾಥರ ಹಾಗೆ
ಧ್ಯಾನಸ್ಥರಾಗಿ
(ಈಗೇಕೆ ಈ ಷಂಡ ಕವಿತೆಗಳು ?
ಬರೆದು ಕೊಡುತ್ತಿದ್ದೇನೆ ಕಂಬನಿ ತೊಟ್ಟಿಕ್ಕುವ ಕೈಯಲ್ಲಿ
ಯುವಕವಿಗಣದ ಸೆಂಟು ಹಾಕಿದ ಕೈಗಳಿಗೆ
ನಮ್ಮನ್ನು ಕೊಂದು ತಾವೂ ಸತ್ತ ಕವಿತೆಗಳನ್ನು)

ಬಾಲಚಂದ್ರನ* ಜೊತೆಗೆ
ರಾಮಚಂದ್ರನ** ಜೊತೆಗೆ
ಕೂರುತ್ತೇನೆ ನಾನು
ಕೇರಳದ ದಂಡೆ ಅರಿಬ್ಬೀ ಕಡಲ ಅಬ್ಬರದ
ಲಯಗಳನ್ನಾಲಿಸುತ್ತಾ ;

ಬಾಲಚಂದ್ರನ ಪ್ರಕಾರ
ಇನ್ನು ಬೆಳಗುಗಳಿಲ್ಲ
ರಾಮಚಂದ್ರನ ಪ್ರಕಾರ
ಸೂರ್ಯ ಹುಟ್ಟೇ ಇಲ್ಲ

ಆದರೂ ಉಳಿದೇ ಬಿಡುತ್ತದೆ
ಈ ಶುದ್ಧ ಕೋಶ ಸಾಗರದ ಎಡೆ ಬಿಡದ ಮೊರೆತ
ದಂಡೆಯ ಹಳ್ಳಿ ಪಟ್ಟಣಗಳೆಲ್ಲಾ ಸತ್ತ ಮೇಲೂ....

---

* ಬಾಲಚಂದ್ರನ್ ಚುಳ್ಳಿಕ್ಕಾಡ್ : ಕೇರಳದ ಹೆಸರಾಂತ ಕವಿ ೭೦ರ ದಶಕದಲ್ಲಿ ವಾಮ ಪಂಥೀಯ ಹೋರಾಟಗಳಲ್ಲಿ ಮುಳುಗಿ ಮೇಲೆದ್ದವರು.

** ರಾಮಚಂದ್ರನ್ ಮೊಕೇರಿ : ಕ್ಯಾಲಿಕಟ್ ವಿಶ್ವವಿದ್ಯಾಲಯದ ನಾಟಕ ವಿಭಾಗದ ಅಧ್ಯಾಪಕ, ರಂಗ ನಿರ್ದೇಶಕ, ೭೦ರ ದಶಕದ ವಾಮ ಪಂಥೀಯ ಚಳುವಳಿಯಲ್ಲಿ ಇನ್ನೂ ಉಸಿರಾಡುತ್ತಿರುವವರು.

# ನ್ಯಾಷನಲ್ ಪಾರ್ಕ್‌ನಲ್ಲಿ ಬಕಧ್ಯಾನ–೨

ಒಂದು ಗಾಡಿ ರಾಣಿಪಾಲ್ ಹಾಕಿ ತೊಳೆದರೂ ಬಿಳೀಬಟ್ಟೆ
ಬೆಳ್ಳಗಾಗುವುದಿಲ್ಲ ಈ ಬಕ ಪಕ್ಷಿಯು ಮೈಯಷ್ಟು.
ಗಾಂಧೀಜಿಯ ಮನಸ್ಸೂ ಇಷ್ಟು ನಿರ್ಮಲವಾಗುವುದಿಲ್ಲ.
ಉಗ್ರ ತಪಸ್ವಿಗಳೂ ಇಷ್ಟು ಸಲೀಸಾಗಿ
ಒಂಟಿ ಕಾಲಿನ ಮೇಲೆ ನಿಲ್ಲುವುದಿಲ್ಲ.

ಏನಾದರೂ ಬಕಧ್ಯಾನ ಬಕಧ್ಯಾನವೇ ಅಂತ
ಹಳೆ ಕವಿತೆಯೊಂದರಲ್ಲಿ ಹಂಗಿಸಿದ ನನಗೆ
ತಾನೇ ಕವಿಯಾಗಿ ಬಂದು ಹೇಳಿತು ಈ ಬಕ !
'ಏಯ್ ಬಕಠಾ ! ನನ್ನ ಹೃದಯದಲ್ಲೇನಿದೆ ಗೊತ್ತಾ ?'

ಬಕ ಕವಿಯ ಎದೆ ಕೊಯ್ದು ಹೃದಯ ಪರೀಕ್ಷಿಸುವ
ಸರ್ಜಿಕಲ್ ವಿದ್ಯೆ ನನಗಿಲ್ಲವಾದ್ದರಿಂದ
ಅದರ ಹೊಟ್ಟೆಯಲ್ಲೇನಿದೆ ಎಂದು ಮಾತ್ರ ಹೇಳಬಲ್ಲೆ.

ಒಂಟಿ ಕಾಲ ಧ್ಯಾನದಲ್ಲಿದ್ದಂತಿದ್ದ ಅದು
ಸರಕ್ಕನೆ ಎತ್ತಿದ್ದ ಕಾಲನ್ನು ಕೆಳಗಿಳಿಸಿ ಬಿಟ್ಟು
ಕತ್ತು ಕೊಂಕಿಸಿ ; ಕತ್ತು ನೀರಿಲ್ಲಿ ಹೊಗಿಸಿ
ಅಬ್ಬೇಪಾರಿ ಹುಳುವ ಗಬಕ್ಕನೆ ನುಂಗಿತಲ್ಲಾ !–
ಆ ಹುಳ ತಳಮಳಿಸುತ್ತಿದೆ ಅದರ ಬಿಳೀ ಹೊಟ್ಟೆಯೊಳಗೆ.

ಪಾಪ, ಧ್ಯಾನಿ ಬಕ ಹುಳ ತಿಂದೇ ಬಾಳಬೇಕು,
ಆದ್ದರಿಂದಲೇ ಅಷ್ಟು ಬೆಳ್ಳಗಿರುವುದು
ಅಷ್ಟು ಮೌನಿಯಾಗಿರುವುದು.

ಈಗ ನೀವೇ ಹೇಳಿ ;
ಇದರ ಹೃದಯದೊಳಗೇನಿದೆ ?

ಗೊತ್ತಿಲ್ಲ ? ಬಿಟ್ಟು ಬಿಡಿ.
ಕಣ್ಣು ಕಾಣದ್ದು ಯಾವೋನಿಗೆ ಬೇಕಾಗಿದೆ ?

* ಎಚ್. ಎಸ್. ಶಿವಪ್ರಕಾಶ್

# ನಿರಂಜನರ ಕತೆಗಳಲ್ಲಿ ವಸ್ತು ಮತ್ತು ತಂತ್ರ

—ಆರ್. ಜಿ. ಹಳ್ಳಿ ನಾಗರಾಜ್

ಮಾರ್ಕ್ ಶೋರರ್ ಎಂಬ ವಿಮರ್ಶಕ ''Technique as Discovery'' ಎಂಬ ಲೇಖನದಲ್ಲಿ* ಕತೆ / ಕಾದಂಬರಿಗಳ 'ವಸ್ತು ಮತ್ತು ತಂತ್ರ' ಎರಡೂ ಒಂದೇ ಎಂದು ಅಭಿಪ್ರಾಯಿಸುತ್ತಾನೆ. ಅವನ ಪ್ರಕಾರ—

(೧) ತಂತ್ರವೆಂದರೆ ಲೇಖನ ಸಾಮಗ್ರಿಯಾದ ಅನುಭವ, ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ;

(೨) ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೂ ವಸ್ತುವನ್ನು ಬೆಲೆ ಕಟ್ಟಲು ಇರುವ ಏಕ ಮಾತ್ರ ಸಾಧನ.

ಇದರಿಂದ ವಸ್ತು ಮತ್ತು ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸಲು ಆಗುವುದಿಲ್ಲ ಎಂದು ಹೇಳಬಹುದಾದರೂ, ಇದೇ ಕಾರಣಕ್ಕಾಗಿ ಒಂದು ಕೃತಿಯ ವಸ್ತುವಿನ ವಿಶ್ಲೇಷಣೆ ಅದರ ತಂತ್ರದ ವಿಶ್ಲೇಷಣೆಯೇ ಆಗಬೇಕಾಗುತ್ತದೆ ಎಂದೂ ಅಭಿಪ್ರಾಯಿಸಬಹುದಾಗಿದೆ.

ವಸ್ತು ಮತ್ತು ತಂತ್ರಕ್ಕೆ ಕೊಂಡಿಯಾದ ಸಾಹಿತ್ಯದ 'ವಸ್ತುವೇ' ಜೀವನ ಹಾಗೂ ಅನುಭವ. ಇಲ್ಲಿ ಜೀವನವೆಂದರೆ ಏನು ಎಂಬ ಪ್ರಶ್ನೆಯೊಂದಿಗೆ ಹತ್ತೆಂಟು ಉತ್ತರಗಳ ಬೆನ್ನು ಕಾಣತೊಡಗುತ್ತದೆ. ಪಾಶವೀ ಪ್ರವೃತ್ತಿಯಿಂದ ಹಿಡಿದು ಅಧ್ಯಾತ್ಮ ವಿಚಾರವನ್ನು ಒಳಗೊಂಡ, ಮಾನವೀಯ ಅನುಕಂಪದ ಬದುಕಿನವರೆಗೆ ಜೀವನದ ಅರ್ಥವನ್ನು ಹಿಗ್ಗಿಸಬಹುದು. ಕೆಲವು ಸಂದರ್ಭಗಳಲ್ಲಿ ಬರೀ ಜೀವನವೇ ಸಾಹಿತ್ಯದ ಒಂದು ವಸ್ತು ಎಂದೂ ಹೇಳಲಾಗದು. ಆದರೆ ಈ ಅನುಭವವು ಜೀವನವನ್ನು ನಿಕಟವಾಗಿ, ಮೂರ್ತವಾಗಿ ಅರಿಯಲು ಸಹಾಯ ಮಾಡುತ್ತದೆ.

*ಗಿರಡ್ಡಿ ಗೋವಿಂದರಾಜ (ವಸ್ತು ಮತ್ತು ತಂತ್ರ) ಸ್ನೇಹ ಪ್ರಕಾಶನ, ಬೆಂಗಳೂರು-೪೦

ಇಲ್ಲಿ ಜೀವನಾನುಭವ ಏಕ ಮುಖವಾಗಿದ್ದೂ ಸಾರ್ವತ್ರಿಕ ಬದುಕಿಗೆ ಸ್ಪಂದಿಸಿದ ರೀತಿ ಒಟ್ಟುಗೂಡಿದಾಗ ಅರ್ಥ ಬರುತ್ತದೆ. ಇಂಥಲ್ಲಿ ಬದುಕಿನ ಅನುಭವ ಕತೆಯ ವಸ್ತುವಾದಾಗ ನಿರೂಪಣಾ ವಿಧಾನದಲ್ಲಿ ಅದನ್ನು ಸಂಘಟಿಸುವ ವಿಧಾನ ದಲ್ಲಿ ಹಾಗೂ ಅದನ್ನು ಕುತೂಹಲ ಕೆರಳಿಸುವಂತೆ ಹೇಳುವಲ್ಲಿ ಪಾತ್ರಗಳ ಪರಸ್ಪರ ಸಂಬಂಧ-ಬೆಳವಣಿಗೆ-ಉದ್ದೇಶಗಳನ್ನು ಆಕರ್ಷಕವಾಗಿ ನಿರೂಪಿಸುವ ಬುದ್ಧಿ ವಂತಿಕೆಯನ್ನೊಳಗೊಂಡ ಸನ್ನಿವೇಶವನ್ನು ಕಥಾ ಸಂವಿಧಾದ ತಂತ್ರವೆಂದೂ ಕರೆಯ ಲಾಗುತ್ತದೆ. ಆಗ ಕೃತಿಯ ಯಶಸ್ಸು ಕಥೆಯ ತಾಂತ್ರಿಕ ಸಾಮರ್ಥ್ಯ ದಿಂದಲೂ ಗಟ್ಟಿಯಾಗಬಹುದು. ಏಕೆಂದರೆ ಸಮರ್ಥವಾದ ತಂತ್ರವೊಂದು ಸೂಕ್ಷ್ಮವಾದ ವಸ್ತುವನ್ನು ಆಸ್ವಾದಿಸುತ್ತದೆ. ಇದೇ ಸಂದರ್ಭದಲ್ಲಿ ಕೃತಿಯೊಂದರ ತಂತ್ರ ಕೃತಕ ವೆಂದು ತೋರಿದಾಗ, ಅದು ಬಾಲಿಶ ಅನಿಸಿದಾಗ ಅದರ ಅಪ್ರಸ್ತುತತೆಯನ್ನು ಹೇಳುವುದರೊಂದಿಗೆ ಕೃತಿಯ ವಸ್ತು ಹಾಗೂ ಧೋರಣೆಗಳ ಕುರಿತು ಚರ್ಚಿಸ ಬಹುದು.

ನಿರ್ಣಯ ಏನೇ ಇದ್ದರೂ ಒಂದು ವಿಶಿಷ್ಟ ಧೋರಣೆಯ ಸಲುವ . ಒಂದು ವಿಶಿಷ್ಟ ತಂತ್ರ ಹುಟ್ಟಿಕೊಂಡಿರುವುದರಿಂದ ವಸ್ತುವಿನ ತಂತ್ರವನ್ನಷ್ಟೇ ಬೇರ್ಪಡಿಸಿ ಕಥಾ ಸಂವಿಧಾನದ ಬಗ್ಗೆ ಯೋಚಿಸಲಾಗುವುದಿಲ್ಲ.

ವಸ್ತು ಮತ್ತು ತಂತ್ರದ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿ ಯೊಂದು ನಮಗೆ ನೀಡುವುದು ಮಹತ್ವಪೂರ್ಣವಾದ ಹಾಗೂ ಅರ್ಥಪೂರ್ಣವಾದ ಅನುಭವ ಎಂಬುದನ್ನು ಅಲ್ಲಗಳೆಯಲಾಗದು.

ಮೇಲಿನ ಪೀಠಿಕೆಯ ಮಾತುಗಳು ಕಥಾ ಸಾಹಿತ್ಯದ ವಸ್ತು-ತಂತ್ರದ ಬಗೆಗಿನ ಅರ್ಥವ್ಯಾಪ್ತಿಯ ಸೀಳು ನೋಟವನ್ನು ಹೇಳುವುದಾದರೂ, ಕನ್ನಡ ಸಾಹಿತ್ಯ ದಲ್ಲಿ ಗಮನಾರ್ಹ ಸಾಹಿತ್ಯ ಕೃಷಿ ಮಾಡಿದ ನಿರಂಜನರ ಸಣ್ಣ ಕತೆಗಳ ಕೋಟೆ ಪ್ರವೇಶಿಸಲು ಇದು ಸಹಕಾರಿ ಆಗುತ್ತದೆಂದು ಭಾವಿಸಬಹುದು.

ಕತೆಗಾರ, ಕಾದಂಬರಿಕಾರ, ಪತ್ರಕರ್ತ, ಅಂಕಣಕಾರ, ಸಂಪಾದಕ-ಇವೆ ಲ್ಲವೂ ಒಬ್ಬ ವ್ಯಕ್ತಿಯಲ್ಲಿ ಮೇಳೈಸಿದಾಗ ಸಾಹಿತ್ಯ ಪ್ರಕಾರವೊಂದರ 'ನೆಲೆ' ಕಂಡು ಕೊಳ್ಳುವುದು ಹೇಗೆಂಬ 'ಜಿಜ್ಞಾಸೆ' ನನಗೆ ಕಾಡಿದೆ. ನಿರಂಜನರ 'ನೆಲೆ', 'ಇದೇ' ಎಂದು ಒಂದು ಪ್ರಕಾರದ ಕಡೆಗೆ ಬೆರಳು ಮಾಡಿ ತೋರಿಸಿದಾಗಲೂ ಆ ಒಂದು ಪ್ರಕಾರ ಬಿಟ್ಟು ಇತರೆ ಪ್ರಕಾರಗಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ವಸ್ತು, ಭಾಷೆ ಹಾಗೂ ಶೈಲಿಯಿಂದಾಗಿ ತನ್ನ ಛಾಪನ್ನು ಒತ್ತಿಕೊಳ್ಳುವ ಬರಹಗಾರ ತನ್ನ ನಂಬಿಕೆಯ ವಿಚಾರಗಳನ್ನೂ ಸ್ಪಷ್ಟವಾಗಿ ಗುರ್ತಿಸಿಕೊಳ್ಳಬಹುದು. ವಿಚಾರ ಅಭಿವ್ಯಕ್ತಿ ವಿಧಾನಗಳು ಏಕ ಕಾಲಕ್ಕೆ ಕಾರ್ಯ ನಿರ್ವಹಿಸುದರಿಂದ ಬರಹ

ಗಾರನ ಮೇಲೆ ಅವುಗಳ ಹಿಡಿತ ಇದ್ದೇ ಇರುತ್ತದೆ. ಬರಹಗಾರನ ವಿಚಾರಗಳು ಆತ ಬದುಕನ್ನು ಸ್ವೀಕರಿಸಿದ ರೀತಿಯಲ್ಲಿ ಕಾರ್ಯ ಪ್ರವೃತ್ತವಾಗುವುದರಿಂದ ಇಲ್ಲಿ 'ಸೈದ್ಧಾಂತಿಕತೆ' ಪ್ರಮುಖ ಪಾತ್ರವಹಿಸುತ್ತದೆ. ಈ ಸೈದ್ಧಾಂತಿಕತೆಯೇ ಬದ್ಧ ಸಾಹಿತ್ಯ ನಿರ್ಮಿತಿಗೂ ದಾರಿ ಮಾಡಿಕೊಡುವುದರಿಂದ ಸಾಹಿತ್ಯ-ಸಮಾಜ-ಸಂಸ್ಕೃತಿ ಇವುಗಳ ಸಂಕೀರ್ಣ ಸಂಬಂಧವನ್ನು ಅರಿಯಲು ಸಮಾಜ ಶಾಸ್ತ್ರೀಯ ದೃಷ್ಟಿ ಬೆಳಸಿಕೊಳ್ಳಬೇಕಾಗುತ್ತದೆ.

ಇಂಥ ಸಮಾಜ ಶಾಸ್ತ್ರೀಯ ದೃಷ್ಟಿಯನ್ನಿಟ್ಟುಕೊಂಡ ಬರಹಗಳನ್ನು ನಿರಂಜನರ ಕೃತಿ ಸಮೂಹದಲ್ಲಿ ಕಾಣಬಹುದು.

ಪ್ರಗತಿಶೀಲ ಸಾಹಿತ್ಯದ ಬಹುಮುಖ್ಯ ಕೊಂಡಿಯಾಗಿದ್ದ ನಿರಂಜನರ ಬದುಕು-ಬರಹ ಹೋರಾಟದಿಂದ ಕೂಡಿತ್ತು. ಬಾಲ್ಯವನ್ನು ವಿಚಿತ್ರ ಸಾಮಾಜಿಕ ಸಂದರ್ಭದ ಒತ್ತಡದಲ್ಲಿ ಕಳೆದ 'ಕುಳಕುಂದ ಶಿವರಾಯ', 'ಕಿಶೋರ'ನಾಗಿ, ಮುಂದೆ 'ನಿರಂಜನ' ಆದದ್ದು ಕುತೂಹಲಕರವಾದದ್ದು. ಹದಿಮೂರನೇ ವಯಸ್ಸಿನಲ್ಲೇ ಕಥಾಲೋಕ ಪ್ರವೇಶಿಸಿದ ನಿರಂಜನರು, ೧೭ನೇ ವಯಸ್ಸಿಗೆ ಪತ್ರಕರ್ತರಾಗಿ, ೨೪ನೇ ವಯಸ್ಸಿಗೆ ಯೌವನಿಗರಾಗಿದ್ದಾಗ ಎಡಪಂಥೀಯ ವಿಚಾರಕ್ಕೆ ಮನಸೋತು ಬರಹಗಳಲ್ಲಿ ಸಾಮಾಜಿಕ ಆರ್ಥಿಕ-ಅಸಮಾನತೆ, ಕ್ರೌರ್ಯ, ದಬ್ಬಾಳಿಕೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸತೊಡಗಿ ಮೂರು ಹಂತಗಳಲ್ಲಿ ತಮ್ಮ ಕಥಾ ಸಾಹಿತ್ಯದ ಬೆಳವಣಿಗೆಗಳನ್ನು ಗುರ್ತಿಸಿಕೊಂಡಿದ್ದಾರೆ.

ಹುಡುಗನಾಗಿದ್ದಾಗಿನ ತನ್ನ ಪರಿಸರದ ಘಟನೆಗಳಿಗೆ ಸಹಜವಾಗಿ ಸ್ಪಂದಿಸಿ, ತಂದೆಯಿಲ್ಲದ ತಬ್ಬಲಿ ಹುಡುಗನ ಅಸಹಾಯಕತೆ, ಒಡವಿಧವೆ ತಾಯಿಯ ಕಷ್ಟ ಕಾರ್ಪಣ್ಯಗಳನ್ನು ಅವಳ ತಳಮಳಗಳನ್ನು ಹಲವಾರು ಕತೆಗಳಿಗೆ ಗ್ರಾಸ ಮಾಡಿ ಕೊಂಡಿದ್ದಾರೆ. ಇದಕ್ಕೆ ಉದಾಹರಣೆ: ಒಂದು ಹಿಡಿ ಹುಲ್ಲು, ಬಹಿಷ್ಕೃತೆ, ಮೂರು ದುಡ್ಡು ಇತ್ಯಾದಿ. ಈ ಕತೆಗಳಲ್ಲೆಲ್ಲಾ ನಿರಂಜನರ ವೈಯಕ್ತಿಕ ಬದುಕಿನ ಆಗು ಹೋಗುಗಳೇ ಸಂಚಾರಿ ಭಾವವಾಗಿ ಕೆಲಸ ಮಾಡಿವೆ ಎನ್ನಿಸುವುದುಂಟು. ಒಂದು ರೀತಿಯ ಆತ್ಮ ಚರಿತ್ರೆಯನ್ನೇ ಇಲ್ಲಿ ಹುಡುಕಬಹುದಾಗಿದೆ.

ಬಾಲ್ಯದ ಕತೆಗಳು ಎಲ್ಲೋ ಹರಿದು-ಹಂಚಿ ಹೋಗಿವೆಯೆಂದು 'ಧ್ವನಿ' ಮೊದಲ ಸಂಪುಟದ ಸ್ವಗತದಲ್ಲಿ ನಿರಂಜನರೇ ಹೇಳಿಕೊಂಡಿದ್ದಾರೆ. ಸುಮಾರು ಇನ್ನೂರರ ಹತ್ತಿರ ಅವರು ಕತೆಗಳನ್ನು ಬರೆದಿದ್ದರೂ 'ಧ್ವನಿ' ಸಂಪುಟ ೧ ಹಾಗೂ ೨ರಲ್ಲಿ ನೂರೈವತ್ತಕ್ಕೂ ಮಿಕ್ಕಿ ಕತೆಗಳಿವೆ. ಇದರಲ್ಲಿ ಸೇರ್ಪಡೆ ಆಗಿರುವ ಕತೆಗಳ

ಹುಟ್ಟು, ಸಂದರ್ಭಗಳನ್ನು ಆರಂಭದಲ್ಲೇ ತಮ್ಮ ಜ್ಞಾಪಕದಿಂದ ೧೯೮೭ರಲ್ಲೇ (ಪಾರ್ಶ್ವವಾಯುವಿಗೆ ತುತ್ತಾದದ್ದು ೧೯೭೧ : ದೇಹದ ಒಂದು ಪಾರ್ಶ್ವ ಅಸ್ಥಿತ್ವ ಕಳೆದುಕೊಂಡಿತ್ತೇ ವಿನಃ ನೆನಪಿಗೆ ಧಕ್ಕೆ ಆಗಿರಲಿಲ್ಲ) ಬರೆದಿದ್ದಾರೆ. ಕತೆಯ ಆರಂಭದಲ್ಲೇ ಕತೆಯೊಂದರ ಹುಟ್ಟು, ಸಂದರ್ಭ, ಬೆಳವಣಿಗೆಗಳ ಬಗ್ಗೆ ಹೇಳಿದಾಗ ಇಂಥ ವಿವರವೊಂದು ಕತೆಯ ಓದುಗ/ವಿಮರ್ಶಕನಿಗೆ ಅಗತ್ಯವೆ ? ಎಂಬ ಪ್ರಶ್ನೆಯ ಜೊತೆಯಲ್ಲೇ ಓದುಗನಿಗೆ ಬೇರೆ ಬೇರೆ ನೆಲೆಯಲ್ಲಿ ಆಲೋಚಿಸಲು ಸಹಾಯಕವಾಗಬಲ್ಲದೆ ? ಎಂದೂ ಚಿಂತಿಸಬೇಕಿದೆ.

ಮುಖ್ಯವಾಗಿ ಸ್ವಾತಂತ್ರ್ಯ ಚಳುವಳಿಯ ಹೋರಾಟ ಹಾಗೂ ನವೋದಯ ಸಾಹಿತ್ಯದ ಉಚ್ಛ್ರಾಯ ಸ್ಥಿತಿಯಲ್ಲೇ ಆದರ್ಶದ, ಕನಸಿನ ಫಲ ಪಡೆಯಲು ಹೊರಟ ನಿರಂಜನ ಗುರ್ತಿಸಿಕೊಂಡದ್ದು ಪ್ರಗತಿಶೀಲರಾಗಿ. ತಾತ್ವಿಕ ಪ್ರಣಾಳಿಕೆಯನ್ನು ಪ್ರಗತಿಶೀಲ ಬರಹಗಾರರು ಕತೆ ಕಾದಂಬರಿಗಳಲ್ಲಿ ತರುವುದರ ಮೂಲಕ ಮಧ್ಯಮ ವರ್ಗದ ಜೀವನಾನುಭವಕ್ಕೆ ಆಪ್ತವಾದವರು. ಇದಕ್ಕೂ ಸಾಮಾಜಿಕ ಚಾರಿತ್ರಿಕ ಒತ್ತಡವಿದೆ. ಒಟ್ಟಿನಲ್ಲಿ ಪ್ರಗತಿಶೀಲ ಬರಹದ ತಾತ್ವಿಕ ನಂಬಿಕೆಗಳು ಕೃತಿಯಲ್ಲಿ ಮೂರ್ತ ರೂಪ ಪಡೆದಿವೆ ಎಂಬುದೂ ಸತ್ಯ. ಈ ತಾತ್ವಿಕತೆಯಲ್ಲಿ ಕ್ರಾಂತಿಯ ಹಂಬಲವಿಟ್ಟುಕೊಂಡು ಆರಂಭದಲ್ಲಿ ಬರೆದ ಕತೆಗಳಲ್ಲಿ 'ರಕ್ತ ಸರೋವರ' 'ಬೆಳಕು ಹರಿಯಿತು', 'ಎಣ್ಣೆ, ಚಿಮಣಿ ಎಣ್ಣೆ' ಮುಂತಾದುವು.

೧೯೪೭ರಲ್ಲಿ ಬರೆದ 'ರಕ್ತ ಸರೋವರ' ಕತೆಗೆ ಎಡಪಂಥೀಯ, ಕ್ರಾಂತಿಕಾರಕ ಬದಲಾವಣೆಯ ಹುಮ್ಮಸ್ಸಿನ ಮನಸ್ಸು ನಿಚ್ಛಳವಾಗಿ ಕೆಲಸ ಮಾಡಿರುವುದನ್ನು ಗುರ್ತಿಸಬಹುದು. 'ರಕ್ತ ಸರೋವರ'ದ ಶೀರ್ಷಿಕೆಯೇ ದುರಂತ ಸೂಚನೆಯ ಹಾಗೂ ಹೋರಾಟ ಕುರಿತ ವಸ್ತುವನ್ನು ಹೇಳುವಂತಿದೆ. ಸರೋವರದ ಪ್ರಶಾಂತತೆಗೆ ರಕ್ತದೋಕುಳಿ ಚೆಲ್ಲಿ ದುರಂತವನ್ನು ಹೇಳುವಲ್ಲಿನ ಈ ಶೀರ್ಷಿಕೆ ಇವೊತ್ತು ಕಾಶ್ಮೀರದಲ್ಲಿ ತಲ್ಲಣಗೊಂಡ 'ದಲ್ ಸರೋವರ'ದ ವಸ್ತು ಸ್ಥಿತಿಯ ದುರಂತವನ್ನೇ ಹೇಳುತ್ತದೆ. ಹಿಂಸೆಯ ರೂಪು ತಾಳಿದ್ದ ಸಂದರ್ಭ 'ದಲ್'ನ ದಡದಲ್ಲಿ ಬಿದ್ದಿದ್ದ ಹೆಣಗಳ ರಾಶಿಯಿಂದ ಬೆಚ್ಚಿ ಬೀಳುವಂತೆ ಮಾಡಿ ಸರೋವರವೇ ರಕ್ತದೋಕುಳಿಯಾದ ಚಿತ್ರಣವನ್ನು ಕೊಡುವಲ್ಲಿ ಕವಿತೆಯೊಂದರ ಗಂಭೀರತೆಯನ್ನು, ರುದ್ರರಮಣೀಯ ಭೀಕರತೆಯನ್ನೂ ನೆನಪಿಸುತ್ತದೆ.

ಕಾವ್ಯಕ್ಕಿರುವ ಲಯ, ಪದ ಪ್ರಯೋಗ, ವಾಕ್ಯ ಸಂಕ್ಷಿಪ್ತತೆ ಈ ಕತೆಯಲ್ಲಿ ಆರಂಭದಿಂದ ಅಂತ್ಯದವರೆಗೂ ಗೋಚರಿಸುತ್ತದೆ. ತುಂಡರಿಸಿದ ಪದಪ್ರಯೋಗದಿಂದಾಗಿ ವಸ್ತುವಿಗೆ, ವಿನ್ಯಾಸಕ್ಕೆ ಎಲ್ಲೂ ಧಕ್ಕೆ ಬಾರದೆ ಕತೆ ಫ್ಲ್ಯಾಶ್ ಬ್ಯಾಕ್‌ನಲ್ಲಿ ನಡೆದು ತಂತ್ರಗಾರಿಕೆಯ ಮಹತ್ವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ.

“ಇನಿಲ್ಲದ ‘ಶೇಕ್’ನಿಗೆ ಗಾಳಿ ಮೆಲ್ಲ ಮೆಲ್ಲನೆ ತಟಾಕದ (ದೋಣಿಯು) ಮೇಲಿಂದ ಬೀಸುತ್ತಿತ್ತು. ‘ವಿಹಾರ ಸರೋವರ’ ರಕ್ತ ಸರೋವರವಾಗಿ ರುದ್ರಭೀಕರವಾಗಿತ್ತು” —ಎಂದು ಅಂತ್ಯವಾಗುವಾಗ ಮನಸ್ಸನ್ನು ಗಲಿಬಿಲಿಯಾಗಿಸುತ್ತದೆ.

ಕ್ರಾಂತಿಯ ಹುನ್ನಾರಿಗೆ ಹಲವಾರು ಉದಾಹರಣೆಯಾಗುವ ಕತೆಗಳು ನಿರಂಜನರ ೧೭–೩೨ರ ವಯಸ್ಸಿನ ಅಂತರದಲ್ಲಿ ಹುಟ್ಟಿದವುಗಳಾಗಿರುವುದರಿಂದ, ಬಹುಶಃ ಅವರು ತೊಡಗಿಸಿಕೊಂಡಿದ್ದ ಎಡಪಂಥೀಯ ಧೋರಣೆಯ ಪ್ರಭಾವವೂ ಇದಕ್ಕೆ ಕಾರಣ ಇದ್ದಿರಬಹುದಾಗಿದೆ.ಗುಣಾತ್ಮಕ ಬೆಳವಣಿಗೆಯನ್ನು ಒಳಗೊಂಡ ಪ್ರಬುದ್ಧ ಕತೆಗಳಲ್ಲಿ ‘ಕೊನೆಯ ಗಿರಾಕಿ’, ‘ಧ್ವನಿ’, ‘ಒಂಟಿ ನಕ್ಷತ್ರ ನಕ್ಕಿತು’, ‘ನಾಸ್ತಿಕ ಕೊಟ್ಟ ದೇವರು’ ಮುಖ್ಯವಾಗುತ್ತವೆ. ಈ ಕತೆಗಳಲ್ಲಿ ನಿರಂಜನರು ಮಾಡಿರುವ ಪ್ರಯೋಗ ಕೂಡ ವಿಶಿಷ್ಟವಾದದ್ದು. ವಸ್ತು ನಮ್ಮೆದುರೇ ಸುಳಿವಂಥಾದ್ದಾದರೂ ಅದನ್ನು ಕಂಡ ರೀತಿ ಮತ್ತು ತಂತ್ರದ ಕುಶಲತೆ ಗಮನಾರ್ಹವಾಗಿದೆ.

“ಕ ಕಾ ಕ ಅ ಆ ಅ” ಎಂಬ ಸಾಂಕೇತಿಕತೆಯ ಅಕ್ಷರಗಳ ದನಿಯಲ್ಲಿ ಮೂಕ ವೇದನೆ ಅನುಭವಿಸುವ ‘ಕಾಣಿ’ಯ ದುರಂತ ಕತೆ–“ಕೊನೆಯ ಗಿರಾಕಿ”. ವ್ಯವಸ್ಥೆಯ ಕ್ರೂರ ದಬ್ಬಾಳಿಕೆ ಚಿತ್ರಿಸುವಲ್ಲಿ ಸಂಕಟ ತೋರುವ ಈ ಕತೆ ನಿರಂತರ ಶೋಷಣೆಯ ಸಂಕೇತವಾಗಿದೆ. ಕೈ ಮೊಂಡಾದವನೊಬ್ಬನ ‘ಸಂಗಾತಿ’ಯಾಗಿದ್ದ ಕಾಣಿ, ಅವನ ಮಾಯವಾಗುವಿಕೆ ನಂತರ, ಸಮಾಜದ ದುರ್ಬಲ ಮನಸ್ಸಿಗರ ದೌರ್ಜನ್ಯಕ್ಕೆ, ದಬ್ಬಾಳಿಕೆಗೆ ಸಿಕ್ಕು ಅನುಭವಿಸುವ ಲೈಂಗಿಕ ಕ್ರಿಯೆಗಳ ಬದುಕಲ್ಲಿ ದೇಹವನ್ನು ಹಿಂಡಿ ಹಿಪ್ಪೆ ಮಾಡಿಕೊಂಡು ನಿತ್ರಾಣವಾಗುವ ಸ್ಥಿತಿಯನ್ನು ಅಂಗೈ ಹುಣ್ಣಿನ ಕನ್ನಡಿಯಾಗಿ ಇಡೀ ಸಮಾಜಕ್ಕೆ ಸವಾಲಾಗಿಸುತ್ತದೆ–ಈ ಕತೆ.

ಕಂಡವರ ಪಾಲಾದ ಕಾಣಿಯು ದೇಹವನ್ನು ಮಾರಿಕೊಳ್ಳುವ ಸ್ಥಿತಿ ಬಂದಾಗ ಗಿರಾಕಿಗಳ ಹುಡುಕಾಟದಲ್ಲಿ ತೊಡಗುತ್ತಾಳೆ. ತನ್ನ ಮನೆ, ಬಂಧು, ಬಳಗ, ಮೊಂಡು ಕೈನವನ ನೆನಪಲ್ಲಿ ಕಾಸಿನ ಬೆಲೆ ಅರಿಯದ ಕಾಣಿಗೆ ಜಗತ್ತು ಕ್ರೂರವಾಗುತ್ತ, ‘ಒಂಟಿ’ಯಾಗುವ ಅನುಭವವಾಗುತ್ತಿದ್ದಂತೆ ಚರ್ಮ ರೋಗಕ್ಕೆ ತುತ್ತಾಗುತ್ತಾಳೆ. ರಾತ್ರಿಯಾಗುತ್ತಿದ್ದಂತೆ ಅಲಂಕಾರ ಮಾಡಿಕೊಂಡು ಗಿರಾಕಿಗಳಿಗೆ ಕಾದು ಬಂದ ಅನಾಮಿಕನ ಜೊತೆಸಾಗಿ, ನಿತ್ರಾಣತಳಾಗಿ ಕೊನೆಗೆ ಆ ಗಿರಾಕಿಯಿಂದ ದುರಂತಡ ಬದುಕು ಅಪ್ಪುವ ಸ್ಥಿತಿ; ನಂತರ ಅವಳ ಹೆಣದ ಮೇಲೆ ಹಾರಾಡುವ ಗಿಡುಗ*ದ

* ಕರ ನಿ ರಂಜನರು ಗಿಡುಗವನ್ನು ಸಾಂಕೇತಿಕರಿಸಿದ್ದು ಸ್ಪಷ್ಟವಿಲ್ಲ. ನಮ್ಮ ಪರಿಸರದಲ್ಲಿ ‘ಹದ್ದು’ ಸತ್ತ ದೇಹದ ಮಾಂಸಕ್ಕೆ ಹಾತೊರೆವ ಪಕ್ಷಿ. ಗಿಡುಗ ಮನುಷ್ಯ, ಪ್ರಾಣಿಗಳ ದೇಹಕ್ಕಿಂತ, ಪಕ್ಷಿಗಳನ್ನು ಹೊಂಚು ಹಾಕಿ ಹಾರಿಸಿಕೊಂಡು ಹೋಗುತ್ತದೆ.

....ಲೇಖಕ

ಸಾಂಕೇತಿಕತೆ ವ್ಯವಸ್ಥೆಯ ಕ್ರೂರ ಹಿಡಿತಕ್ಕೆ ತಾನಿನ್ನೂ ಕೊನೆಯ ಗಿರಾಕಿಯಾಗಿದ್ದೇನೆಂದು ಧ್ವನಿಸುವ ಅರ್ಥ ಮನುಕುಲಕ್ಕೆ ಸವಾಲಾಗಿ ನಿಲ್ಲುತ್ತದೆ. ಕಾಣಿಯ ಸ್ಥಿತಿಯನ್ನು ನಿರಂಜನರು 'ಒಂದು' ನಗರದಲ್ಲಿ ಕಂಡು ಚಿತ್ರಿಸಿರಬಹುದಾದರೂ ಇಂಥ 'ಕಾಣಿ'ಯರು ಎಲ್ಲ ನಗರಗಳಲ್ಲೂ ಕಾಣಬರುವವರೇ ಆಗಿದ್ದಾರೆ, 'ಕಾಣಿ'ಯೊಬ್ಬಳ ಸಾವು 'ಕೊನೆಯ ಗಿರಾಕಿ'ಯಲ್ಲಾಗಿದ್ದರೂ ದಿನವು ಇದೇ ಸಾವು ದಾವಣಗೆರೆಯಲ್ಲೋ, ಮಂಗಳೂರಿನಲ್ಲೋ, ಮೈಸೂರಿನಲ್ಲೋ ಸಂಭವಿಸುತ್ತ, ಯಾವುದೇ ನಗರದಲ್ಲೂ ಕಾಣ ಬರುವ ಕಾಣಿಯರನ್ನು ಜೀವಂತ ಪಾತ್ರವಾಗಿಸಿ ಕಾಡಿಸುತ್ತದೆ.

ಈ ಕತೆಯ ವಸ್ತು ನಿರಂತರ ಶೋಷಣೆಯನ್ನೊಳಗೊಂಡ ಸಮಾಜವೊಂದರ ಊನವನ್ನು ಹೇಳುತ್ತದಾದರೂ, ಕತೆ ಹೇಳುವ ಶೈಲಿ ಹಾಗೂ ತಂತ್ರದಲ್ಲೂ ಯಶಸ್ವಿಯಾದದ್ದಾಗಿದೆ. ಕನ್ನಡದ ಬಹುಮುಖ್ಯ ಆ್ಯಂಥಾಲಜಿಗಳಲ್ಲಿ ಈ ಕತೆ ಸೇರಲು ಬಹುಶಃ ರೋಗಗ್ರಸ್ತ ಸಮಾಜದ ಚಿತ್ರಣ ಜೀವಂತವಾಗಿರುವುದೇ ಒಂದು ಮುಖ್ಯ ಕಾರಣವಾಗಿದ್ದಿರಬಹುದು. ವಸ್ತು ಮತ್ತು ತಂತ್ರಗಳ ಸಂಬಂಧದ ದೃಷ್ಟಿಯಿಂದಲೂ ಸರಳ ಸಾರ್ಥಕ ಕತೆಯಾಗಿರುವುದೂ ಕಾರಣವಾಗಿರಬಹುದು. ಹಲವಾರು ಆ್ಯಂಥಾಲಜಿಗಳಿಗೆ ಸೇರಿಸಿದ ಸಂಪಾದಕ (ವಿಮರ್ಶಕ)ರು ಏನೇ ಹೇಳಿಕೊಂಡರೂ, ನಿರಂಜನರ ಇತರ ಕತೆಗಳಿಗಿಂತ ಹೆಚ್ಚು. ವಸ್ತುನಿಷ್ಠವಾದ ಹಾಗೂ ಸರಳ ಭಾಷಾ ಪ್ರಯೋಗದಿಂದ ಸುಗಮ ಓದು ಪಡೆವ ಈ ಕತೆಯ ಮೂಲ ಸೆಲೆ ಮಾನವೀಯ ದೃಷ್ಟಿಯಾಗಿದೆ.

ನಿರಂಜನರ ಇಡೀ ಸಾಹಿತ್ಯಾಭಿವ್ಯಕ್ತಿಗೆ ಒಂದು ರೂಪಕದಂತಿರುವ "ಧ್ವನಿ"–ಕ್ರೂರ ದಬ್ಬಾಳಿಕೆಯೆದುರು, ಸಮಾನತೆ ಪರವಾಗಿ ಮೂಕನೂ ಮಾತನಾಡುತ್ತಾನೆ ಎಂಬುದು. ಸ್ವಾತಂತ್ರ್ಯ ಭಾರತ ಸ್ಥಿತಿಯನ್ನು ಸಾಂಕೇತಿಸುವ ಈ ಕತೆ ಮೌನದುಡಿಯ ಅರ್ಥವನ್ನು ಅರ್ಥೈಸುತ್ತದೆ.

'ಕಣ್ಣಾರೆ ಕಂಡವರು' ಎಂಬ ಕತೆ ಪ್ರಸ್ತುತವಾಗಿರುವ ರಾಜಕೀಯ ಗೂಂಡಾ ಸಂಸ್ಕೃತಿ ಮತ್ತು ನಿರ್ಲಜ್ಜತನವನ್ನು ಸಾರಿ ಹೇಳುತ್ತದೆ. ರೋಗಗ್ರಸ್ತ ಸಾಮಾಜಿಕ ವ್ಯವಸ್ಥೆಗೆ ಈ ಕತೆ ಒಳ್ಳೆ ಉದಾಹರಣೆ. ಹೆಪ್ಪುಗಟ್ಟಿದ ಕ್ರೌರ್ಯವನ್ನು ಇದು ದಾಖಲಿಸುತ್ತದೆ. ಗೂಂಡಾಗಿರಿ ಮತ್ತು ಶ್ರಮಜೀವಿಗಳ ನಡುವಿನ ಸಾತ್ವಿಕತೆಯ ನಡುವೆ ಕತೆಯ ವಸ್ತು ಸೆಣಸುತ್ತದೆ. ಪೋಲೀಸ್ ವ್ಯವಸ್ಥೆ ಜನಸಾಮಾನ್ಯನಿಗೆ ರಕ್ಷಣೆ ಕೊಡುವ ಬದಲು ಭಯ ಹುಟ್ಟಿಸುವ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಈ ಕತೆ ನ್ಯಾಯದ ತಕ್ಕಡಿಗೆ ಏರಿಳಿತಗಳನ್ನು ಕೊಡುವಲ್ಲಿನ ತೂಗಾಟದ 'ವ್ಯಂಗ್ಯ'ವನ್ನು ಧ್ವನಿಸುತ್ತದೆ. ಕತೆಯ ವಸ್ತುವಿಗೆ ತಕ್ಕದಾದ ಭಾಷೆಯ ಬಿಗುವು ಇಲ್ಲಿದೆ. ತಂತ್ರಗಾರಿಕೆಯಷ್ಟೇ ಮರೆಯದೆ 'ವಾಸ್ತವ' ಎದುರಾಗುತ್ತದೆ.

'ಒಂಟಿ ನಕ್ಷತ್ರ ನಕ್ಕಿತು' ಎರಡು ತಲೆಮಾರುಗಳ ನಡುವಿನ ಅಭಿಪ್ರಾಯ ಭಿನ್ನತೆಯನ್ನು, ಅಣೆಕಟ್ಟಿನ ವ್ಯಾಜ್ಯದಲ್ಲಿ ನಿರೂಪಿಸಿಸುವ ಕತೆಯಾಗಿದೆ. ಬಡತನ-ಪ್ರಗತಿ, ಭೀತಿ-ಸಾಹಸ, ಮೂಢನಂಬಿಕೆ-ವೈಜ್ಞಾನಿಕತೆಗಳನ್ನು ಪ್ರತಿನಿಧಿಸುವ ಎರಡು ತಲೆಮಾರುಗಳೂ ಇಲ್ಲಿವೆ. ಬದುಕಿನ ಮುನ್ನಡೆಗೆ ಇಲ್ಲಿನ ಕಥಾ ವಸ್ತು ಸಂಘರ್ಷಕ್ಕಿಳಿದು ಸಮರ್ಥ ಕತೆಯಾಗಿ ನಿಲ್ಲುತ್ತದೆ.

ಕೆಲವು ಕತೆಗಳನ್ನಷ್ಟೇ ಪ್ರಾತಿನಿಧಿಕವಾಗಿ ತೆಗೆದುಕೊಂಡು ಇಲ್ಲಿ ಚರ್ಚಿಸಿರುವೆನಾದರೂ, ನಿರಂಜನರ ನೂರಾರು ಕತೆಗಳಲ್ಲಿ ಹತ್ತಾದರೂ "ಗಟ್ಟಿಕಾಳು"ಗಳಾಗಿರುವುದು ಕನ್ನಡ ಸಾಹಿತ್ಯ ಸಂದರ್ಭಕ್ಕೆ ಮಹತ್ವದ ಕಾಣಿಕೆಯಾಗಿದೆ. ಕಾದಂಬರಿಕಾರರಾಗಿಯೂ ಯಶಸ್ವಿಯಾಗಿರುವ ನಿರಂಜನರು, ಕಥಾ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರಗಳ ವಸ್ತು-ವಿನ್ಯಾಸ ಪಡೆದಿದ್ದಾರೆ. ಇವಕ್ಕೆ ಅವರ ನಿಕಟ ಪತ್ರಿಕಾ ಸಂಪರ್ಕ ಹೊಂದಿದ್ದರ ಜೊತೆಗೆ ಅಂಕಣಕಾರಾಗಿದ್ದುದೂ ಕಾರಣ ಇದ್ದಿರಬಹುದು. ಕನಸುಗಾರ ನಿರಂಜನರು ತಾವು ಕಂಡದ್ದನ್ನು ವೈಭವೀಕರಿಸದೆ, ವಸ್ತುಸ್ಥಿತಿಗೆ ಚ್ಯುತಿ ಬಾರದಂತೆ ಬರೆದಿದ್ದರೂ, ಒಮ್ಮೊಮ್ಮೆ ಅವರ ಕತೆಗಳ ಬಂಧ ಸಡಿಲ ಅನ್ನಿಸುತ್ತದೆ. ಸರಳ ವಿವರಗಳ ಕಣ್ಣು ಪಟ್ಟಿ ಹಲವು ಕತೆಗಳಲ್ಲಿದೆ. ಉದಾಹರಣೆಗೆ, 'ಹವಾಲ ಇಮಾಂಸಾಬಿ' ವರದಿಯಂತಿದೆ. ಇಲ್ಲಿ ವಸ್ತು ಮತ್ತು ತಂತ್ರ ಒಂದೇ ಆಗಿರುತ್ತದೆಯೆಂದಾದರೂ ಕೆಲವೊಮ್ಮೆ ಇವೆರಡರ ನಡುವೆ ಪೈಪೋಟಿ ಬೆಳೆಯುತ್ತದೆ.

ವಿವರಗಳನ್ನು ಕಡಿತಗೊಳಿಸಿ ಮತ್ತು-ಸಂಭಾಷಣೆಗಳ ಮೂಲಕ ವಸ್ತು-ವಿಷಯಕ್ಕೆ ವ್ಯಾಪ್ತಿ ಬರುವಂತೆ ಬಹಳಷ್ಟು ಕತೆಗಳಲ್ಲಿ ಎಚ್ಚರ ವಹಿಸಿರುವ ನಿರಂಜನರು ಸಂಭಾಷಣೆಗಳಲ್ಲೇ ಕತೆ ನೇಯ್ವ ಕಲೆಗಾರಿಕೆಯನ್ನು ತಂತ್ರಗಾರಿಕೆಯನ್ನೂ ಕರಗತಮಾಡಿಕೊಂಡದ್ದು ಅವರ ಬರವಣಿಗೆಯ ವೈಶಿಷ್ಟ್ಯ. ವಸ್ತುವೊಂದನ್ನು ಪೂರ್ವಯೋಜಿತ ಚೌಕಟ್ಟಿಗೆ ಒಳಪಡಿಸಿ ಅದರ ಸುತ್ತಾ ವಾಸ್ತವ ವಿಚಾರಗಳನ್ನು ಗ್ರಹಿಸುತ್ತಾ, ಕತೆಗೆ ಬೇಕಾದ ಓಟಕ್ಕೆ ಕಾಲ್ಪನಿಕ ವಿಚಾರಗಳನ್ನು ಸೇರಿಸುತ್ತಾ, ಮನಸ್ಸು ತಾಕುವ ಕೆಲಸ, ಸಾಕಷ್ಟು ಕತೆಗಳಲ್ಲಿದೆ. ಇವೆಲ್ಲವುಗಳ ಹಿಂದೆ ಕೆಲಸ ಮಾಡಿದ್ದು ಸಹಜ ಪ್ರೀತಿ ಹಾಗೂ ಮಾನವೀಯ ಕಳಕಳಿ.

**ಸಮಾರೋಪಕ್ಕಿಷ್ಟು ಮಾತು :**

ಸ್ವಾತಂತ್ರ್ಯ ಪೂರ್ವದ ಆದರ್ಶ, ನವೋದಯದ ಸೌಂದರ್ಯ ಪ್ರಜ್ಞೆ, ಪ್ರಗತಿಶೀಲತೆಯ ಕ್ರಾಂತಿಯ ಕನಸು, ನವ್ಯ-ದಲಿತ-ಬಂಡಾಯಗಳ ಸಂದರ್ಭದ ಸಾಮಾಜಿಕ ಬದಲಾಣೆಯ ತುಡಿತಗಳು ನಿರಂಜನ ಅವರಲ್ಲಿ ನಿರಂತರ ಕೆಲಸ ಮಾಡಿವೆ. ಇದಕ್ಕೆ ಅವರ ಹಲವು ಕತೆಗಳೇ ಪುರಾವೆ.

ಪ್ರಸ್ತುತ ಸಾಹಿತ್ಯ ಸಂದರ್ಭದಲ್ಲಿ ನಿರಂಜನರ ಕತೆಗಳ ಮರುವಿಮರ್ಶೆ ಆಗಬೇಕಿರುವುದರಿಂದ ವಿಮರ್ಶಾಮಾನದಂಡ ಏನಾಗಬೇಕು ? ಸಾಹಿತಿಯೊಬ್ಬ ಬೆಳೆದ ಪರಿಸರ, ಹಿನ್ನೆಲೆ, ಬದುಕು–ಹೋರಾಟ, ಬದ್ಧತೆಗಳು ಇಲ್ಲಿ ಗಣನೆಗೆ ಬರಬಹುದೆ ? ಈ ಇತ್ಯಾದಿ ಆಲೋಚನೆಗೆ ಉತ್ತರ ಕಂಡುಕೊಳ್ಳುವುದಾದರೆ ನಿರಂಜನರ ಕತೆಗಳ ಬಗ್ಗೆ ಮರು ಆಲೋಚನೆ ಬೇಕೆನಿಸುತ್ತದೆ. *


ನೆನಪು ಗ್ರಂಥಗಳು :

೧. ನಿರಂಜನ ಅಭಿನಂದನೆ (ನಿರಂಜನ ಕಥಾ ಸಾಹಿತ್ಯ ; ಲೇ : ಸುಬ್ರಾಯ ಚೊಕ್ಕಾಡಿ) ಪ್ರ : ಕರ್ನಾಟಕ ಸಂಘ, ಪುತ್ತೂರು-೫೭೪ ೨೦೧. (ದ.ಕ.)
೨. ಕಥೆ ಮತ್ತು ಕಥಾ ಸಾಹಿತ್ಯ : ಲೇ : ಎಸ್. ಎಲ್. ಭೈರಪ್ಪ, ಸಾಹಿತ್ಯ ಭಂಡಾರ,
೩. ಕ್ರಿಯೆ–ಪ್ರತಿಕ್ರಿಯೆ : ಲೇ : ಡಾ। ಕೆ. ಕೇಶವಶರ್ಮ, ಅನ್ವೇಷಣೆ ಪ್ರಕಾಶನ.
೪. ಸಮಾಜವಾದಿ ವಾಸ್ತವ : ಲೇ : ಆರ್. ವಿ. ಭಂಡಾರಿ, ಶ್ರೀ ರಾಘವೇಂದ್ರ ಪ್ರಕಾಶನ
೫. ಧ್ವನಿ-೧ : (ಪ್ರವೇಶ-ಬಿದರಹಳ್ಳಿ ನರಸಿಂಹಮೂರ್ತಿ), ಐ. ಬಿ. ಎಚ್. ಪ್ರಕಾಶನ,


---

# ಅಪ್ಪ ಸತ್ತ ರಾತ್ರಿ

–ಸತೀಶ ಕುಲಕರ್ಣಿ

ಜಂಗು ಹತ್ತಿದ ಚಿಮಣಿ ಎಣ್ಣೆ
ಖಾಲಿ ಡಬ್ಬಿ ಹಿಡಿದು ಹಾದಿಗೆ ಇಳಿದಿದ್ದೆ
ಸುರಿಯಲು ಎಣ್ಣೆ
ಸುಡಲು ಕಟ್ಟಿಗೆ–ಇಷ್ಟು ಬೇಕಾದದ್ದು
ಕಟ್ಟಿಗೆ ಅಡ್ಡೆಯ ವಕ್ರ ಬಾಯಿಯ
ವಖಾರದ ನಾಯಿ ಗಾಳಿಗೆ ಜೀವ ಕಳೆದುಕೊಳ್ಳುವ
ಕೈ ಕಂದೀಲು
ಡಿಸೆಂಬರ ಚಳಿ ; ಗೇಟಿಗೆ ನಿಂತೆ
ಹೂಡದೇ ನಿಂತ ಚಕ್ಕಡಿ ತೂಗದ ತಕ್ಕಡಿ
ತೂಗಿಸಿ ಹೇರಿದ ಕಟ್ಟಿಗೆ ಚಕ್ಕಡಿಯಲ್ಲಿ
ಚಿಮಣಿ ಎಣ್ಣೆ ಸಿಕ್ಕಾಗ
ಅಪ್ಪ ಚಟ್ಟದ ಮೇಲಿಂದ ಹೊರಟ
ಆಗ ನಡುಕದ ಕುರುಡು ರಾತ್ರಿ
ಅಮ್ಮ, ಮನೆ, ಪುಟ್ಟಿ ತಮ್ಮ, ತಂಗಿ
ವಖಾರದ ನಾಯಿ, ನನ್ನ ಹರಕು ಅಂಗಿ
ಅಪ್ಪನ ಹೆಣ ಭಾರದಂತೆ ಹೆಗಲೇರಿ ಕುಳಿತವು
ಅಪ್ಪ ಸತ್ತ ರಾತ್ರಿಯಂತೆ ಇನ್ನೂ ಇಳಿದಿಲ್ಲ

(ವಿಷಾದ ಯೋಗ_ಸಂಕಲನದಿಂದ)

# ರಂಗ ಶಿಕ್ಷಣ : ಕೆಲವು ಪ್ರಶ್ನೆಗಳು

೧) 'ರಂಗ ಶಿಕ್ಷಣ'ವನ್ನು ಶಾಲೆ-ಕಾಲೇಜುಗಳಿಗೆ ಕಡ್ಡಾಯಗೊಳಿಸಬೇಕೆಂಬ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ರಂಗ ಶಿಕ್ಷಣ ಕಡ್ಡಾಯವಾದರೆ ಅದರ ವಿನ್ಯಾಸ ಹೇಗಿರಬೇಕೆಂದು ಅಪೇಕ್ಷಿಸುತ್ತೀರಿ ?

೨) ಶಾಲೆ-ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಪಠ್ಯಕ್ರಮದ ವಿಷಯಗಳಿರುವಂತೆ ರಂಗ ಶಿಕ್ಷಣಕ್ಕೂ ಪಠ್ಯ ವಿಷಯ ಬೇಕೆನಿಸುತ್ತದೆಯೆ ?

ಅ) ಪಠ್ಯ ಬೇಕೆನಿಸಿದರೆ ಹೇಗಿರಬೇಕು ?

ಆ) ಪಠ್ಯಕ್ರಮ ಬೇಡವೆನ್ನುವುದಾದರೆ ಏಕೆ ಬೇಡ ?

೩) 'ರಂಗಶಿಕ್ಷಣ'ವನ್ನು ಸರಕಾರ ಶಾಲೆ-ಕಾಲೇಜುಗಳಿಗೆ ಕ್ರಮಬದ್ಧಗೊಳಿಸಿದರೆ ಅಂಥ ಸಂದರ್ಭದಲ್ಲಿ ಶಿಕ್ಷಕ/ಉಪನ್ಯಾಸಕ/ತರಬೇತುದಾರನ ಅರ್ಹತೆ ಏನಿರಬೇಕು ? (ರಂಗಶಿಕ್ಷಕನ ಪೂರ್ವ ಶಿಕ್ಷಣ, ಉದಾ : ಪದವಿ ಇತ್ಯಾದಿ ಲೆಕ್ಕಿಸಬೇಕೆ ?)

೪) 'ರಂಗಭೂಮಿ' ಈಗ ವಿಕೇಂದ್ರೀಕರಣಗೊಂಡಿದೆ. ಗ್ರಾಮೀಣ ಪ್ರದೇಶಗಳಲ್ಲಿ ರಂಗಕ್ರಿಯೆಗೆ ಪ್ರೋತ್ಸಾಹ ಆಶಾದಾಯಕವಾಗಿದೆ. ಇಂಥ ಸಂದರ್ಭದಲ್ಲಿ 'ರಂಗ ಶಿಕ್ಷಣ' ಪಡೆದ ವಿದ್ಯಾರ್ಥಿಗಳು ಇನ್ನೂ ಹೆಚ್ಚು ಕ್ರಿಯಾಶೀಲರಾಗಲು ಸರಕಾರಿ ಉದ್ಯೋಗಗಳಷ್ಟೇ ಅವರ ಬದುಕಿನ ಆಶಾಕಿರಣ-ಇದು ಸಮರ್ಥನೀಯವೆ ?

ಅ) ಹೌದಾದರೆ ಹೇಗೆ ?

ಆ) ಅಲ್ಲವಾದರೆ ಬದುಕಿಗೆ ಮಾರ್ಗ ಸೂಚಿ ?

ರಂಗ ಶಿಕ್ಷಣ :  ಮೊದಲ ಕಂತಿನ ಉತ್ತರಗಳು

## "ಪಠ್ಯೇತರ ಚಟುವಟಿಕೆಯಾಗಿ ರಂಗಶಿಕ್ಷಣ ಕಡ್ಡಾಯವಾಗಲಿ"

—ಡಾ॥ ಕೆ. ಮರುಳಸಿದ್ದಪ್ಪ

೧. ಯಾವುದೇ ವಿಷಯವನ್ನು ಶಾಲೆ ಕಾಲೇಜುಗಳಲ್ಲಿ ಕಡ್ಡಾಯವಾಗಿ ಕಲಿಸುವುದು ತಪ್ಪು. ಬೇರೆ ಹಲವಾರು ವಿಷಯಗಳನ್ನು ಆರಿಸಿ ಕೊಳ್ಳಲು ವಿದ್ಯಾರ್ಥಿಗಳಿಗೆ ಅವಕಾಶವಿರುವಂತೆ ರಂಗಶಿಕ್ಷಣಕ್ಕೂ ಅವಕಾಶವಿರ ಬೇಕು. ಈಗ ಶಾಲಾ-ಕಾಲೇಜುಗಳಲ್ಲಿ ರಂಗಶಿಕ್ಷಣವೆನ್ನುವುದನ್ನು ಐಚ್ಛಿಕ ವಿಷಯ ವಾಗಿಯೂ ಕಲಿಸುತ್ತಿಲ್ಲವೆನ್ನುವುದು ತುಂಬಾ ಬೇಸರ ತರಿಸುವ ಸಂಗತಿ. ರಂಗಶಿಕ್ಷಣ ಮಾತ್ರವಲ್ಲ-ಸಂಗೀತ, ನೃತ್ಯ, ಚಿತ್ರಕಲೆ, ಶಿಲ್ಪ ಮುಂತಾದ ಲಲಿತಕಲೆಗಳನ್ನೆಲ್ಲಾ ಆರಿಸಿಕೊಳ್ಳಲು ಶಾಲಾ ಕಾಲೇಜುಗಳಲ್ಲಿ ಅವಕಾಶವಿರಲು ಸಾಧ್ಯವಿದೆ. ಸಾಧ್ಯ ವಾದರೆ ಈ ವಿಷಯಗಳನ್ನು ಪರೀಕ್ಷೆಯ ಚೌಕಟ್ಟಿನಿಂದ ಹೊರಗೆ ಪ್ರತ್ಯೇಕವಾಗಿಯೇ ಕಲಿಸಬಹುದು. ಸಂಗೀತ, ನೃತ್ಯ, ನಾಟಕ, ಚಿತ್ರಕಲೆ ಮುಂತಾದ ವಿಷಯ ಗಳಲ್ಲಿ ಪ್ರವೃತ್ತರಾಗುವುದರಿಂದ ಮಕ್ಕಳ ಅಂತರಂಗ ಶುದ್ಧವಾಗುತ್ತದೆ. ಬಳಿಕ ಶಾಲೆಯ ಪರಿಸರವೂ ಲವಲವಿಕೆಯಿಂದ ಕೂಡಿರುತ್ತದೆ. ವಿದ್ಯಾರ್ಥಿಗಳ ಬಿಡುವಿನ ವೇಳೆಯನ್ನು ಸೃಜನಾತ್ಮಕವಾಗಿ ಬಳಸಿಕೊಳ್ಳುವಂತೆ ಅವರನ್ನು ಈ ಚಟುವಟಿಕೆಗಳ ಮೂಲಕ ಪ್ರೇರೇಪಿಸಿ ಅಶಿಸ್ತು, ಅವಿಧೇಯತೆ, ಅಶ್ರದ್ಧೆಗಳನ್ನು ಹೋಗಲಾಡಿಸ ಬಹುದು. ಈಗಲೂ ಇಂತಹ ಚಟುವಟಿಕೆಗಳಿಗೆ ಪ್ರೋತ್ಸಾಹ ಕೊಡುತ್ತಿರುವ ಶಾಲಾ ಕಾಲೇಜುಗಳ ಪರಿಸರ ಆಶಾದಾಯಕವಾಗಿರುವುದನ್ನು ಉಳಿದವರು ನೋಡಿ ಕಲಿಯಬಹುದಾಗಿದೆ.

೨. ಪಠ್ಯಕ್ರಮದಲ್ಲಿಯೇ ರಂಗಶಿಕ್ಷಣವನ್ನು ಸೇರಿಸುವುದಾದರೆ ಅದಕ್ಕೆ ಸೂಕ್ತವಾದ ಪಾಠಸೂಚಿ, ಪ್ರಾಯೋಗಿಕ ತರಬೇತಿಯ ವ್ಯವಸ್ಥೆ ಮುಂತಾದವನ್ನು ಪರಿಣತ ಮಂಡಲಿ ಯೋಜಿಸಬೇಕಾಗಿದೆ. ಪುಸ್ತಕಗಳು, ಸಾಧಾರಣ ವಾದ ಒಂದು ರಂಗಭೂಮಿ ಮುಂತಾದ ಸಾಧನ ಸಲಕರಣೆಗಳನ್ನು **ಕನಿಷ್ಠ ವೆಚ್ಚದಲ್ಲಿ** ಶಾಲೆಯ ಬೊಕ್ಕಸಕ್ಕೆ ಹೊರೆಯಾಗದಂತೆ ಯೋಜಿಸಲು ಖಂಡಿತಾ ಸಾಧ್ಯವಿದೆ.

ಪಠ್ಯೇತರ ಚಟುವಟಿಕೆಯಾಗಿಯೂ, ಈಗ ಶಾರೀರಿಕ ಶಿಕ್ಷಣವಿರುವಂತೆ ಸಂಗೀತ, ನೃತ್ಯ, ನಾಟಕ, ಚಿತ್ರಕಲೆಗಳನ್ನು ಕಲಿಸಬಹುದು.

೩. ಪಠ್ಯಕ್ರಮದಲ್ಲಿ ಸೇರಿಸಲಿ, ಅಥವಾ ಪಠ್ಯೇತರ ಚಟುವಟಿಕೆಯಾಗಿರಲಿ, ಸೂಕ್ತ ಅರ್ಹತೆಯುಳ್ಳ ಶಿಕ್ಷಕ-ಉಪನ್ಯಾಸಕರು ಇರಲೇಬೇಕು. ಎರಡು ಮೂರು ಪರಸ್ಪರ ಪೂರಕ ಕಲೆಗಳಲ್ಲಿ ತರಬೇತಿ ನೀಡಬಲ್ಲ ಅಧ್ಯಾಪಕರಿದ್ದರೆ ಕಡಿಮೆ ಖರ್ಚಿನಲ್ಲಿ ಇದು ಪರಿಣಾಮಕಾರಿಯಾಗಿ ಜಾರಿಗೆ ಬಂದೀತು. ಇಲ್ಲದಿದ್ದರೆ ಒಂದೊಂದು ವಿಷಯಕ್ಕೂ ಒಬ್ಬೊಬ್ಬ ಅಥವಾ ಇನ್ನೂ ಹೆಚ್ಚಿನ ಅಧ್ಯಾಪಕರ ತಂಡ ಇವೆಲ್ಲಾ ಸೇರಿ ಸಾರ್ವಜನಿಕ ಹಣವನ್ನು ದುಂದು ಮಾಡಲು ಇದೊಂದು ಹಂಚಿಕೆಯಾಗಿಬಿಡಬಹುದು. ಈಗಿರುವ ಶಿಕ್ಷಕರಲ್ಲೇ ಆಸಕ್ತಿಯಿರುವವರನ್ನು ಆರಿಸಿ ಸೂಕ್ತ ತರಬೇತಿ ಕೊಡಿಸಬಹುದು. ಅಥವಾ ಹೊಸಬರನ್ನೂ ಆಯ್ಕೆಮಾಡಿಕೊಳ್ಳಬಹುದು. ಹೀಗೆ ತರಬೇತಿ ನೀಡಲು-ಇವೆಲ್ಲವನ್ನೂ, ಯೋಜಿಸಿ ಕಾರ್ಯರೂಪಕ್ಕೆ ತರಲು ರಾಷ್ಟ್ರೀಯ ನಾಟಕಶಾಲೆಯ ಪದವೀಧರರು, ಈಗಾಗಲೇ ಹವ್ಯಾಸಿ ರಂಗಭೂಮಿಯಲ್ಲಿ ಹೆಸರು ಮಾಡಿರುವ ಪರಿಣತರು, ನೀನಾಸಂ, ರಂಗಾಯಣದಂತಹ ಸಂಘಟನೆಗಳು ಸಂಬಂಧಿಸಿದವರಿಗೆ ಅಥವಾ ಸರ್ಕಾರಕ್ಕೆ ಮಾರ್ಗದರ್ಶನ ಮಾಡಬಹುದಾಗಿದೆ.

೪. ಸರ್ಕಾರಿ ಉದ್ಯೋಗಗಳನ್ನೇ ನೆಚ್ಚಿಕೊಂಡು ಬದುಕನ್ನು ರೂಪಿಸಿಕೊಳ್ಳುವ ವ್ಯಕ್ತಿಗಳು, ಸರ್ಕಾರಿ ನೆರವಿನ ಆಶ್ರಯದಲ್ಲಿಯೇ ಬೆಳೆಯ ಬಯಸುವ ಸಂಘಟನೆಗಳಿಂದ ಅರ್ಥಪೂರ್ಣ ಚಳುವಳಿ ಬೆಳೆಯುತ್ತದೆ ಎಂಬ ನಂಬಿಕೆ ನನಗಿಲ್ಲ. ಅಂದರೆ ಇವುಗಳನ್ನು ನಿರಾಕರಿಸಬೇಕೆಂಬ ಹಠವೂ ಇಲ್ಲ. ನಮ್ಮಂತಹ ಬಡ ದೇಶದಲ್ಲಿ ಸರ್ಕಾರ ತುರ್ತಾಗಿ ಗಮನಹರಿಸಬೇಕಾದ ಹಲವಾರು ಸಮಸ್ಯೆಗಳಿವೆ. ಸಾಹಿತ್ಯ, ಕಲೆಗಳಿಗೆ ಆಶ್ರಯ ಪ್ರೋತ್ಸಾಹವನ್ನು ಸರ್ಕಾರದಿಂದ ಗರಿಷ್ಠ ಮಟ್ಟದಲ್ಲಿ ಬಯಸುವವರು ಇವೆಲ್ಲವನ್ನೂ ಮರೆಯಬಾರದು.

ಉತ್ತಮ ಕಲೆ, ಸಾಹಿತ್ಯ ಬೆಳೆಯಲು ಸೂಕ್ತ ವಾತಾವರಣ, ಪರಿಸರವನ್ನು ನಿರ್ಮಿಸಲು, ಸಾಧನ ಸಲಕರಣೆಗಳನ್ನು ಒದಗಿಸಲು, ಸ್ಥಳಾವಕಾಶ ಮಾಡಿಕೊಡಲು ಹಾಗೂ ಅಲ್ಪ ಪ್ರಮಾಣದ ಧನ ಸಹಾಯ ನೀಡಲು ಸರ್ಕಾರ ಮುಂದಾಗಬೇಕು. ಆದರೆ ನಮ್ಮ ಅಭಿವೃದ್ಧಿ ಪರವಾದ ಯೋಜನೆಗಳನ್ನು ಕುಂಠಿತಗೊಳಿಸಿ ಕಲೆಗೆ ಆದ್ಯತೆ ಕೊಡಬೇಕೆಂದು ನಾನು ಹೇಳಲಾರೆ.

ಯಾರ ಜೀವನವೂ ಸರ್ಕಾರವನ್ನು ಅವಲಂಬಿಸಬಾರದು. ಬಡಗಿ, ಕಮ್ಮಾರ, ಕುಂಬಾರ, ಚಮ್ಮಾರ, ನೇಯ್ಗೆಯವರೆಲ್ಲಾ ಅವರವರ ಉದ್ಯೋಗ

ವನ್ನೇ ಅವಲಂಬಿಸಿ ಜೀವನ ನಿರ್ವಹಿಸುತ್ತಿದ್ದಾರೆ. ಅಥವಾ ಕಷ್ಟದಿಂದ ಬದುಕು ತ್ತಿದ್ದಾರೆ. ಸಾಹಿತಿ ಕಲಾವಿದರು ಇವರಿಗಿಂತ ಹೆಚ್ಚೂ ಅಲ್ಲ; ಕಡಿಮೆಯೂ ಅಲ್ಲ. ನಿಜವಾದ ಕಲಾವಿದ ಬದುಕುವುದಕ್ಕೆ ಅನೇಕ ಮಾರ್ಗಗಳಿವೆ. ನಮ್ಮ ಅಗತ್ಯಗಳನ್ನು ಅನುಸರಿಸಿ ನಮ್ಮ ಬದುಕಿನ ಕಲ್ಪನೆ ರೂಪುಗೊಳ್ಳುತ್ತದೆ. ಅಲ್ಲದೆ, ಸರ್ಕಾರವನ್ನು ಅವಲಂಬಿಸಿದಂತೆ ಸಾಹಿತಿ ಕಲಾವಿದರ ಸೃಜನಶೀಲತೆ ಹ್ರಸ್ವಗೊಳ್ಳುತ್ತ ಹೋಗು ತ್ತದೆ ಎಂದೇ ನನ್ನ ನಂಬಿಕೆ. ಪ್ರೇಕ್ಷಕರನ್ನು ನಂಬಿ ರಂಗಭೂಮಿ ಬೆಳೆಯಬೇಕು. ಈ ಮೂಲಭೂತ ಸಂಗತಿಯನ್ನು ಒಪ್ಪಿಕೊಂಡುಬಿಟ್ಟರೆ, ನಮ್ಮ ರಂಗಭೂಮಿಯ ಕಲ್ಪನೆ ಮತ್ತು ಗುರಿಗಳೆರಡೂ ಸ್ಪಷ್ಟಗೊಳ್ಳುತ್ತವೆ.

ಇನ್ನು, ಈಗ ಕೊಡುತ್ತಿರುವ ಸರ್ಕಾರಿ ಬಹುಮಾನಗಳು, ಧಾಸಾಶನ ಗಳು, ಅಕಾಡೆಮಿ ಸದಸ್ಯ, ಅಧ್ಯಕ್ಷಗಿರಿಗಳು ಅರ್ಹರಿಗೇ ನ್ಯಾಯವಾಗಿಯೇ ಸಿಗು ತ್ತಿವೆ ಎಂದು ಯಾರೂ ತಿಳಿದಿಲ್ಲ. ಸಾಹಿತಿ ಕಲಾವಿದರನ್ನು ಪುಢಾರಿಗಳ ಮಟ್ಟಕ್ಕೆ ಇಳಿಸಿರುವ ಈ ಸರ್ಕಾರಿ ಪ್ರೋತ್ಸಾಹ ಇಲ್ಲದಿದ್ದರೆ ಚೆನ್ನಾಗಿರುತ್ತದೆ.

---

## "ನಾಟಕ ಶಿಕ್ಷಣ ಪ್ರಾಥಮಿಕ ಹಂತದಿಂದಲೇ ಕಡ್ಡಾಯವಾಗುವುದು ಲೇಸು"

---

—ಎ. ಎಸ್. ಮೂರ್ತಿ

೧. ಶಾಲಾ-ಕಾಲೇಜುಗಳಲ್ಲಿ ರಂಗಶಿಕ್ಷಣ ಕಡ್ಡಾಯಗೊಳಿಸುವ ಬಗ್ಗೆ ನೀವು ಕೇಳಿದ್ದೀರಿ. ನನ್ನ ಅಭಿಪ್ರಾಯದಲ್ಲಿ ನಾಟಕ ಶಿಕ್ಷಣ ಪ್ರಾಥಮಿಕ ಹಂತದಿಂದಲೇ ಕಡ್ಡಾಯವಾಗುವುದು ಲೇಸು. 'ರಂಗಮುಖೇನ ಶಿಕ್ಷಣ' ಮಕ್ಕಳ ಮನಸ್ಸನ್ನು ಪ್ರಫುಲ್ಲಗೊಳಿಸಿ-ರಂಗಚರಿತ್ರೆಯ ಪುಟಗಳನ್ನು ಅವರು ಕಾತರ-ಕುತೂಹಲಗಳಿಂದ ತೆರೆದು ನೋಡಲು ಹದ ಮಾಡಿದಂತಾಗುತ್ತದೆ.

೨. ಕಲಾಮಂದಿರ, ಬಿಂಬ ಮಕ್ಕಳ ಶಾಲೆ ಹಾಗೂ ಅಭಿನಯ ತರಂಗದಲ್ಲಿ ದಕ್ಕಿದ ಅನುಭವದಿಂದ ಹೇಳಬೇಕೆಂದರೆ ಪ್ರಾಥಮಿಕ ಹಂತದಲ್ಲಿ ಆಟ, ಹಾಡು, ಕುಣಿತ, ಪೈಂಟಿಂಗ್‌ಗಳ ಮೂಲಕ ಪಾಠ ಮಾಡುತ್ತ-ಮಕ್ಕಳಲ್ಲಿರುವ ಕ್ರಿಯಾಶಕ್ತಿ ಹೆಚ್ಚುವ ರೀತಿ ಯೋಜನೆ ರೂಪಿಸಿಕೊಂಡರೆ-ಮಕ್ಕಳಲ್ಲಿರುವ ಕಲಿಯುವ

ಬಯಕೆ ಹೆಚ್ಚುತ್ತದೆ. ಅದು ವೃದ್ಧಿಯಾಗಲು ಅನುಕೂಲವಾಗುವಂತೆ ಶಾಲಾ-ಕಾಲೇಜುಗಳ ಪಠ್ಯಕ್ರಮ ರೂಪಿಸಬೇಕಾಗುತ್ತದೆ.

ಶಾಲೆಯ ಹಂತಕ್ಕೆ ಬಂದಾಗ ರಂಗವಿಭಾಗಗಳ ವಿವಿಧ ವಿನ್ಯಾಸಗಳನ್ನು ರಂಗಚರಿತ್ರೆಯ ಕಿರು ಪರಿಚಯವನ್ನು ತಿಳಿಸುತ್ತಾ-ಥಿಯರಿಯೊಂದಿಗೆ ಪ್ರಾಕ್ಟಿಕಲ್ಸ್‌ಗೂ ಹೆಚ್ಚು ಒತ್ತು ನೀಡಬೇಕಾಗುತ್ತದೆ.

ನಾಟಕಕಾರರ ಪರಿಚಯ, ನಾಟಕ ವಾಚನ, ವಿದ್ಯಾರ್ಥಿಗಳ ಅಭಿನಯ ಪ್ರತಿಭೆ ಹೊರಸೂಸುವಂತ ಕಿರುನಾಟಕಗಳ ರಚನೆ ಮತ್ತು ಪ್ರದರ್ಶನ, ಮಾತಿನ ಲಹರಿ ದಕ್ಕುವ ರೀತಿಯ ಪ್ರಯೋಗಗಳು, ಉತ್ತಮ ನಾಟಕಗಳ ಪ್ರದರ್ಶನದ ಕ್ಯಾಸೆಟ್‌ಗಳ ವೀಕ್ಷಣೆ, ಅನುಭವಿ ನಟ, ನಟಿಯರು, ರಂಗತಜ್ಞರೊಂದಿಗೆ ಸಂವಾದ, ಮೇಕಪ್, ರಂಗಸಜ್ಜಿಕೆಯ ಪ್ರತ್ಯಕ್ಷ ಪ್ರದರ್ಶನಗಳು ಪಾಠಕ್ರಮದ ಪಟ್ಟಿಯಲ್ಲಿ ಸೇರಿರುವಂತಾಗಬೇಕು. ವಿಷಯ ಸರಳವಾಗಿ ನಿರೂಪಿಸುತ್ತಾ ನಾಟಕ ರಂಗದ ಬಗ್ಗೆ ಸದಭಿರುಚಿ ಮೂಡಿಸುವ ಅನುಭವಿ ಶಿಕ್ಷಕರು ಇರುವಂತಾಗಬೇಕು.

೩. ಖಂಡಿತವಾಗಿರಬೇಕು.

ಅ. ಹೇಳಿ ಕೇಳಿ ನಾಟಕ 'ಟೀಂವರ್ಕ್'ನಿಂದ ಆಗುವಂತದು. ನಾಟಕ ರಂಗದ ಎಲ್ಲ ವಿಭಾಗಗಳ ವಿವರಗಳನ್ನು ಬೇರೆ ಬೇರೆಯಾಗಿ ತಿಳಿದನಂತರವೇ ಅವುಗಳ ಕಲಾತ್ಮಕ ಸಂಯೋಜನೆ ಹೇಗೆ ಸಾಧ್ಯ ಎಂದು ತಿಳಿಯುವುದು ಸಾಧ್ಯ. ನಾಟಕಕಾರ ಒಂದು ವಸ್ತುವನ್ನು ಕುರಿತು ನಾಟಕ ರಚಿಸಿದನಂತರ -ನಿರ್ದೇಶಕ ಅದನ್ನು ತನ್ನ ಮನೋಗತಕ್ಕೆ ಅನುಗುಣವಾಗಿ ಹೇಗೆ ವ್ಯಾಖ್ಯಾನಿಸುತ್ತಾನೆ ಎಂದು ಅರ್ಥವಾಗುತ್ತದೆ. ಮೇಕಪ್, ರಂಗವಿನ್ಯಾಸ, ವಸ್ತ್ರವಿನ್ಯಾಸ, ಬೆಳಕು ವಿನ್ಯಾಸ, ಕೋರಿಯೋಗ್ರಫಿ ಮುಂತಾದವುಗಳ ಸಮ್ಮಿಳನದಿಂದ 'ಕೊಲ್ಲಾಜ್' ರೀತಿ ಒಂದು ಸುಂದರ ಕಲಾಕೃತಿ ರಂಗದ ಮೇಲೆ ಮೂಡಬಹುದು. ಇವೆಲ್ಲದರ ಪರಿಜ್ಞಾನವಿದ್ದವ ಮಾತ್ರ 'ಕ್ರಿಯೇಟೀವ್' ಆಗಿ ಏನಾದರೂ ಚಿಂತಿಸಬಲ್ಲ. ಪಠ್ಯಕ್ರಮದಲ್ಲಿ ಈ ಎಲ್ಲ ವಿಭಾಗಗಳ ಶಿಕ್ಷಣಕ್ಕೆ ಅವಕಾಶವಿಲ್ಲದಿದ್ದಲ್ಲಿ ಡೆಲ್ಲಿ, ಮುಂಬಯಿ, ಮದ್ರಾಸು-ಬೆಂಗಳೂರಿನಲ್ಲಿ ನೋಡಿದ ಒಳ್ಳೆ ನಾಟಕ ಪ್ರದರ್ಶನಗಳ 'ಮಕ್ಕಿಕಾಮಕ್ಕಿ' ಕಾಪಿಯಾಗಿ-ರಂಗಪ್ರಯೋಗಗಳು ಜೆರಾಕ್ಸ್ ಕಾಪಿ ಆದಾವು. ಹಾಗಾಗದಿರಬೇಕಾದರೆ 'ಪಠ್ಯ' ಬೇಕೇಬೇಕು.

೪. ಡಿ.ಡಿ.ಎಂ., ಎನ್.ಎಸ್.ಡಿ., ನೀನಾಸಂ, ಅಭಿನಯ ತರಂಗ ಮುಂತಾದ ಕಡೆ ಶಿಕ್ಷಣ ಪಡೆದ ಮಂದಿ ಅಧ್ಯಾಪಕರಾಗಬಯಸಿದರೆ

ಅವಶ್ಯ ಅವರಿಗೆ ಅವಕಾಶವಿರಬೇಕು. ಇಲ್ಲೆಲ್ಲೂ ಓದದೆ ನಾಟಕ ಕಲೆಗಾಗೇ ಬದುಕನ್ನು ಮೀಸಲಿಟ್ಟು-ಅನುಭವ ಗಟ್ಟಿಗೊಳಿಸಿಕೊಂಡಿರುವ ಅನುಭವಿಗಳಿಗೂ ಅರ್ಹತೆಯ ಹಣೆಪಟ್ಟಿ ಹಚ್ಚಬಹುದು. ಪಾಠ ಮಾಡುವುದು ಕಷ್ಟ ಎನುವಂತಹ ಅನುಭವೀ ತಜ್ಞರನ್ನು ಅತಿಥಿ ಉಪನ್ಯಾಸಕರಾಗಿ ಆಹ್ವಾನಿಸಿ ಅವರ ಅನುಭವದ ಅನಿಸಿಕೆಗಳನ್ನು ಹಂಚಿಕೊಳ್ಳಬಹುದು.

೪. ನಾಟಕ್ಕ ಒಂದು ವಿಚಿತ್ರ ಚಟ ಒಮ್ಮೆ ಈ ಚಟಕೆ ಬಲಿ ಬಿದ್ದವನು ಅದನ್ನು ಬಿಟ್ಟು ಬದುಕುವುದೇ ಕಷ್ಟ. ಈ ಕಾರಣಕ್ಕೆ ದುಡಿಯುತ್ತಲೇ ನಾಟಕ ಅಧ್ಯಯನಕ್ಕೆ ಬರುವ ಅಭ್ಯರ್ಥಿಗಳನ್ನು ಅಭಿನಯ ತರಂಗದಲ್ಲಿ ಕಂಡಿದ್ದೇನೆ-ನಾಟಕ ತಂಡ ಕಟ್ಟಿ ಕೈ ಖಾಲಿಯಾಗಿ ಬೀದಿಗೆ ಬೀಳುವ ಸ್ಥಿತಿ ಬಂದಾಗಲೂ ಒಳ್ಳೆ ನಾಟಕ ಪ್ರದರ್ಶಿಸುವ ಕನಸು ಹೊತ್ತವರು ನನ್ನ ಮುಂದಿದ್ದಾರೆ. 'ಗ್ರಾಮೀಣ ಪ್ರದೇಶದಲ್ಲಿ ರಂಗಕ್ರಿಯೆಗೆ ಪ್ರೋತ್ಸಾಹ ತುಂಬ ಆಶಾದಾಯಕವಾಗಿದೆ ಎಂಬುದರಲ್ಲಿ ಏನೇನೂ ಅನುಮಾನವಿಲ್ಲ. ಆದರೆ ಅಲ್ಲಿ ನಾಟಕ ಆಡಿಸುತ್ತಿರುವ ಎಲ್ಲ ಮಂದಿ ರಂಗಶಿಕ್ಷಣ ಪಡೆದವರೇ ಎಂದು ಹೇಳಲಾಗುವುದಿಲ್ಲ. ಸರಕಾರಿ ಉದ್ಯೋಗದಲ್ಲಿದ್ದೂ -ನಾಟಕ ಆಡಿಸುವ ಉಮೇದು ತೋರುವ ತರಬೇತಿ ಪಡೆದ ಅಭ್ಯರ್ಥಿ-ನಾಟಕ ಕಡ್ಡಾಯವಾದಾಗ ಅಧ್ಯಾಪಕನಾಗಬಯಸಿದರೆ ಆತನನ್ನು 'ಕಾಂಟ್ರ್ಯಾಕ್ಟ್' ಮೇಲೆ ಕಳುಹಿಸಲು ಅನುಕೂಲ ಮಾಡಬಹುದು. ಶಾಲೆಯೊಂದರಲ್ಲಿ ಬೇರೆ ಪಾಠ ಮಾಡುತ್ತಿರುವ ಮೇಷ್ಟರ ಉದ್ಯೋಗದಲ್ಲಿದ್ದರೆ-ನಾಟಕ ವಿಭಾಗಕ್ಕೆ ಆತನನ್ನು ಅಧ್ಯಾಪಕನನ್ನಾಗಿ ಮಾಡಬಹುದು. ಕಾರ್ಪೋರೇಷನ್, ಗ್ರಾಮ ಪಂಚಾಯಿತಿ ಯವರು-ಖಾಸಗೀ ಸಂಸ್ಥೆಯ ಭಾರಿ ಭಾರಿ ಕುಳಗಳು ನಾಟಕ ವಿಭಾಗವೊಂದನ್ನು ಆರಂಭಿಸಿ ಉದ್ಯೋಗಕ್ಕೆ ನೆರವಾಗಬಹುದು. ಪ್ರಾಥಮಿಕ ಹಂತದಿಂದ ನಾಟಕ ಒಂದು ಕಡ್ಡಾಯವಾದರೆ-ಪಾಠ ಮಾಡಲು ಸಹಸ್ರಾರು ಮಂದಿಗೆ ಅವಕಾಶವಾಗುತ್ತದೆ. ಆಗ ನಾಟಕ ಶಾಲೆಗಳ ಸಂಖ್ಯೆಯೂ ಹೆಚ್ಚಬೇಕಾಗುತ್ತದೆ. ದೆಹಲಿಯ ಎನ್.ಎಸ್.ಡಿ., ಹೆಗ್ಗೋಡಿನ ನೀನಾಸಂ, ಬೆಂಗಳೂರಿನ ಅಭಿನಯ ತರಂಗ ಬಿಟ್ಟರೆ ಬೇರೆಲ್ಲಿ ಅವಕಾಶವಿದೆ ? ಡಿ.ಡಿ ಯಂ.ನಲ್ಲಿ 8-10 ಜನ ಸೇರಬಹುದು. ಮೈಸೂರಿನಲ್ಲಿ ಈಗ ಮಹಿಳೆಯರಿಗೆ ಮಾತ್ರ ಅವಕಾಶ. ಈಗಿರುವ ಸ್ಥಿತಿಯಲ್ಲಿ ನಾಟಕ ಅಕಾಡೆಮಿ, ಸಂಸ್ಕೃತಿ ಇಲಾಖೆಗಳು ತರಬೇತಿ ಪಡೆದ ಮಂದಿಗೆ ಉದ್ಯೋಗ ಒದಗಿಸುವ ದಿಕ್ಕಿನಲ್ಲಿ ಶಿಬಿರಗಳ ಹೊಗೆ ಅವರಿಗೆ ಬಿಡಬಹುದು. ಕಾರ್ಖಾನೆ, ಬ್ಯಾಂಕು ಮುಂತಾದ ಕಡೆ 'ಕ್ರೀಡೆ'ಗೆ ಮಹತ್ವವಿತ್ತು ಉದ್ಯೋಗ ನೀಡುವಂತೆ 'ನಾಟಕ'ಕ್ಕೂ ಮಹತ್ವ ಬರುವ ದಿನ ಬಂದರೆ ಅದು ಕಲಾವಿದರ ಪಾಲಿಗೆ ನಿಜವಾದ ಆಶಾಕಿರಣವೂ ಆದೀತು.

## "ರಂಗಶಿಕ್ಷಣ ನೀಡುವ ಶಿಕ್ಷಕನಿಗೆ ವಿಶ್ವವಿದ್ಯಾಲಯದ ಪದವಿ ಬೇಕೆಂದೆನಿಸುವುದಿಲ್ಲ"

—ಗೊ. ರು. ಚನ್ನಬಸಪ್ಪ

೧. ರಂಗಕಲೆ ವ್ಯಕ್ತಿಯ ಅಭಿರುಚಿ ಆಸಕ್ತಿಗಳಿಗೆ ಸಂಬಂಧಿಸಿದುದು. ಅದನ್ನು ಶಾಲಾ-ಕಾಲೇಜುಗಳಲ್ಲಿ ಕಡ್ಡಾಯಗೊಳಿಸುವುದು ಸೂಕ್ತವೆನಿಸುವುದಿಲ್ಲ. ಅದು ಆಯ್ಕೆಯ ವಿಷಯವಾಗಿ ಪಠ್ಯಕ್ರಮದಲ್ಲಿ ಸೇರುವುದು ಅಗತ್ಯ. ಕಡ್ಡಾಯದಿಂದ ವಿದ್ಯಾರ್ಥಿಗಳಿಗೆ ಕಲಾಭ್ಯಾಸ ಮಾಡಿಸಲಾಗುವುದಿಲ್ಲ. ಅವರಲ್ಲಿ ಸಹಜ ಆಸಕ್ತಿ ಮತ್ತು ಒಲವುಗಳಿದ್ದರೆ ಮಾತ್ರ ಸಾಧ್ಯ. ಅಂತಹ ಪ್ರತಿಭೆಗಳನ್ನು ಗುರುತಿಸಿ ರಂಗಶಿಕ್ಷಣ ನೀಡಬಹುದು.

೨. ಬೇಕೆನಿಸುತ್ತದೆ. ರಂಗಶಿಕ್ಷಣವೆಂದರೆ ಕೇವಲ ಅಭಿನಯವಲ್ಲ. ಸಂಬಂಧಪಟ್ಟ ಶಾಸ್ತ್ರಾಭ್ಯಾಸವೂ ಅಗತ್ಯ. ಅಭ್ಯಾಸ ಅಧ್ಯಯನದ ಹಿನ್ನಲೆಯಿರುವ ಅಭಿನಯ ಅರ್ಥಪೂರ್ಣವಾಗಿರುತ್ತದೆ ; ಕಲಾತ್ಮಕವಾಗಿರುತ್ತದೆ. ಈ ದೃಷ್ಟಿಯಿಂದ ಪಠ್ಯಕ್ರಮ ಅಗತ್ಯ.

ಪಠ್ಯಕ್ರಮದಲ್ಲಿ ರಂಗಮಾಧ್ಯಮದ ಸ್ವರೂಪ ಆಶಯ ಮತ್ತು ಪರಿಣಾಮಗಳ ಪರಿಚಯವಿರಬೇಕು. ರಂಗಸಜ್ಜಿಕೆ, ಪ್ರಯೋಗ ತಂತ್ರಜ್ಞಗಳು, ಅಭಿನಯ ವಿನ್ಯಾಸಗಳನ್ನು ತಿಳಿಸಬೇಕು. ಆಯ್ದ ನಾಟಕ ಕೃತಿಗಳಿರಬೇಕು. ವಿವಿಧ ಪ್ರದರ್ಶನ ಕಲೆಗಳ ಪರಿಚಯವಿರಬೇಕು.

೩. ಶಾಲಾ ಕಾಲೇಜುಗಳಲ್ಲಿ ರಂಗಶಿಕ್ಷಣಕ್ಕೆ ಅವಕಾಶ ಕಲ್ಪಿಸಿದರೆ ತರಬೇತಿ ಪಡೆದ ಶಿಕ್ಷಕರಿರಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈಗಂತೂ ತರಬೇತಿ ಪಡೆಯಲು ಸಾಕಷ್ಟು ಅವಕಾಶಗಳಿವೆ. ಸಾಂಘಿಕ ತರಬೇತಿಯ ಜೊತೆಗೆ ಪ್ರಾಯೋಗಿಕ ಅನುಭವವಿದ್ದ ಶಿಕ್ಷಕರಾದರೆ ಹೆಚ್ಚು ಪರಿಣಾಮಕಾರಿ. ರಂಗಶಿಕ್ಷಣ ನೀಡುವ ಶಿಕ್ಷಕನಿಗೆ ವಿಶ್ವವಿದ್ಯಾಲಯ ಪದವಿ ಬೇಕೆಂದು ನನಗನಿಸುವುದಿಲ್ಲ. ಆದರೆ ಆತ ತರಬೇತಿ ಪಡೆಯುವಷ್ಟು ಮತ್ತು ಶಿಕ್ಷಣ ನೀಡುವಷ್ಟು ಓದುಬರಹ ಬಲ್ಲವನಾಗಿದ್ದರೆ ಸಾಕು. ಏಕೆಂದರೆ ಇಲ್ಲಿ ಪದವಿಗಿಂತ ಪ್ರತಿಭೆಯದೇ ಮುಖ್ಯ ಪಾತ್ರ.

೪ ರಂಗಶಿಕ್ಷಣ ಪಡೆದ ಪ್ರತಿಭಾವಂತ ಯುವಕರನ್ನು ರಾಜ್ಯ ಯುವಜನ ಇಲಾಖೆ ಬಳಸಿಕೊಳ್ಳಬಹುದು. ಶಾಲಾ ಕಾಲೇಜುಗಳಲ್ಲಿ ಆಸಕ್ತ ವಿದ್ಯಾರ್ಥಿಗಳಿಗೆ ರಂಗಶಿಕ್ಷಣ ಕೊಡಿಸಬಹುದು. ಜಿಲ್ಲೆಗೊಬ್ಬರಂತೆ ನುರಿತ ರಂಗ ಶಿಕ್ಷಕರನ್ನು ಯುವಜನ ಇಲಾಖೆ ನೇಮಿಸಿಕೊಳ್ಳಬಹುದು. ಇಂತಹ ಸಂದರ್ಭಗಳಲ್ಲಿ ಅವರಿಗೆ ಸೂಕ್ತ ಸಂಭಾವನೆ ಗೊತ್ತುಮಾಡಬಹುದು. ಆದರೆ ರಂಗಶಿಕ್ಷಕರ ಹುದ್ದೆ 'ಸರ್ಕಾರಿ ಹುದ್ದೆಯಾದರೆ' ರಂಗಶಿಕ್ಷಣಕ್ಕೆ ನ್ಯಾಯ ಒದಗುವುದು ಕಷ್ಟವಾಗಬಹುದು. ಇಲ್ಲಿ ಹೆಚ್ಚು ಸ್ವಾತಂತ್ರ್ಯವಿರಬೇಕಾಗುತ್ತದೆ.

---

" ರಂಗಶಿಕ್ಷಣ ಪಡೆದವರು ಗ್ರಾಮಾಂತರದಲ್ಲಿ ಕ್ರಿಯಾಶೀಲರಾಗಲು ಅನುಕೂಲಕರ ವಾತಾವರಣ ದೊರೆಯಬೇಕು "

---

—[illegible]

೧ ರಂಗ ಶಿಕ್ಷಣವನ್ನು ಕಡ್ಡಾಯಮಾಡಬಾರದು

ಅದೊಂದು ಐಚ್ಛಿಕ ವಿಭಾಗವಾಗಿರುವುದು ಒಳ್ಳೆಯದು. ಆಸಕ್ತಿ ಇದ್ದವರು ಅದರ ಕಲಿಕೆಯನ್ನು ಸಂತೋಷದಿಂದ ಸಕ್ರಿಯವಾಗಿ ಭಾಗವಹಿಸಿ ಮತ್ತೆ ತಮ್ಮ ಆಸಕ್ತಿಯನ್ನು ಉಳಿಸಿಕೊಂಡು ಮುಂದೆಯೂ ಬೆಳೆಸಿಕೊಂಡು ಹೋಗುವ ಸಾಧ್ಯತೆ ಇದೆ.

ನನ್ನ ಅನುಭವದಲ್ಲಿ ಯಾವ ವಿಷಯವನ್ನೇ ಬಲವಂತವಾಗಿ ಹೇರಿದಾಗ ಅದರ ಬಗ್ಗೆ ಅಸಡ್ಡೆ ಮೂಡುವುದಲ್ಲದೆ ವಿಷಯವನ್ನೇ ದೂಷಿಸುವಂತಾಗುತ್ತದೆ. ದ್ವೇಷಿಸಲೂಬಹುದು. ಮೇಲಿನ ಮಾತುಗಳಿಂದ ಅನಿಸಿಕೆಗಳಿಂದ ಪ್ರಶ್ನೆಯ ಎರಡನೇ ಭಾಗಕ್ಕೆ ಉತ್ತರ ಬೇಕಿಲ್ಲ.

೨. ರಂಗಶಿಕ್ಷಣವನ್ನು ಒಂದು ಐಚ್ಛಿಕ ವಿಭಾಗವಾಗಿ ಪ್ರಾರಂಭಿಸಿದಲ್ಲಿ ಇತರ ಎಲ್ಲ ವಿಷಯಗಳಿಗೆ ಹೇಗೆ ಒಂದು ಕ್ರಮಬದ್ಧ - ಪಾಠಕ್ರಮ ಹೇಗೆ ಬೇಕೋ ಹಾಗೇ ಈ ವಿಷಯಕ್ಕೂ ಬೇಕು.

ಪಠ್ಯ ಕ್ರಮದಲ್ಲಿ ನಾಟಕದ ಹುಟ್ಟು ಬೆಳವಣಿಗೆ – ಚರಿತ್ರೆ ಎಲ್ಲ ದೇಶಗಳ, ನಾಟಕ ಸಾಹಿತ್ಯದ ಸೂಕ್ಷ್ಮ ಪರಿಚಯ, ಪ್ರದರ್ಶನದ ರೀತಿಯಲ್ಲಿ ವೈವಿಧ್ಯತೆ ಪಾತ್ರಗಳ ವಿಶ್ಲೇಷಣೆ ಅಲ್ಲದೆ ಪರಂಪರೆ ಪ್ರಯೋಗ ರೀತಿಗಳ ಬಗ್ಗೆ ಜ್ಞಾನ ತಿಳುವಳಿಕೆ ಪ್ರದರ್ಶನದ ವಿವಿಧ ಹಂತಗಳ ಬಗ್ಗೆ ಆಳವಾದ ಅಭ್ಯಾಸ ಎಲ್ಲವನ್ನು ಬಹು ಶಿಸ್ತಿನಿಂದ ನಡೆಸಬೇಕು. ಇದು ಅತಿ ಅಗತ್ಯ.

ತಾನು ಕಲಿಯುತ್ತಿರುವಾಗಲೇ ಕಲಿತದ್ದನ್ನು ಪ್ರಯೋಗ ಮಾಡಲು ಅನುಕೂಲವಾದ ರಂಗಸ್ಥಳ – ಅಲ್ಲದೆ ಬೆಳಕು, ರಂಗಸಜ್ಜಿಕೆ – ಪ್ರಸಾಧನ, ಪರಿಕರ, ಉಡುಪು ವಿನ್ಯಾಸ ತಯಾರಿಕೆಗೆ ಬೇಕಾದ ಎಲ್ಲ ಅನುಕೂಲಗಳೂ ಇರಬೇಕು.

ಮತ್ತೆ ಹಲವಾರು ಪ್ರದರ್ಶನಗಳನ್ನು ನೋಡುವ ಅವಕಾಶ ಕಲ್ಪಿಸಬೇಕು, ಹೆಸರಾಂತ ಅನ್ನುವುದಕ್ಕಿಂತ ಉತ್ತಮ ಶ್ರೇಷ್ಠ ನಿರ್ದೇಶಕರೊಡನೆ ಸಂವಹನೆ–ಮಾಡುವಂತಿರಬೇಕು.

೩. ಮೊದಲನೆಯದು ಅವನಿಗೆ 'ರಂಗಶಿಕ್ಷಣ'ದ ಸಂಪೂರ್ಣ ತಿಳುವಳಿಕೆ– ಅನುಭವ ಇರಬೇಕು. ಪದವೀಧರನಲ್ಲದಿದ್ದರೂ ನಾಟಕ ಸಾಹಿತ್ಯದ ಪ್ರದರ್ಶನ ರೀತಿಗಳ ಪೂರ್ಣ ಜ್ಞಾನ ಇರಬೇಕು. 'while knowledge is like a horse, experience is a Jockey' ಬರೀ ಸಾಹಿತ್ಯವನ್ನು ಓದಿ–ಅದರ ಬಗ್ಗೆ ತಿಳುವಳಿಕೆ ಇದ್ದವನಿಗಿಂತ ಅದು ಪ್ರದರ್ಶನ ಕಲೆಯಾದ್ದರಿಂದ–ಪ್ರದರ್ಶನ ಕಲೆಯ ಎಲ್ಲಾ ಪ್ರಕಾರಗಳನ್ನೂ–ಸಮಸ್ಯೆಗಳನ್ನೂ ಅವುಗಳಿಗೆ ಪರಿಹಾರಗಳನ್ನೂ ಅರಿತಿರುವವನಾದರೆ ಒಳ್ಳೆಯದು.

ಕಲಿಸುವ ಶಕ್ತಿ, ಆತ್ಮಸ್ಥೈರ್ಯ, ಆತ್ಮವಿಶ್ವಾಸ, ಮುಂದಾಳತ್ವ, ಕಲ್ಪನೆ, ಶಿಸ್ತು, ಶ್ರದ್ಧೆ, ಹೊಂದಾಣಿಕೆ, ಆರೋಗ್ಯ ಇಂತಹ ಗುಣಗಳು ಅವನ ಪೂರ್ವ ಶಿಕ್ಷಣಕ್ಕಿಂತ ಮುಖ್ಯವಾದವು.

೪. 'ಒಪ್ಪತಕ್ಕಮಾತೇ' ಶಿಕ್ಷಣ ಪಡೆದವನಿಗೆ ಉದ್ಯೋಗ ಕಲ್ಪಿಸುವುದು ಸರ್ಕಾರದ ಉದ್ದೇಶವಾಗಿದ್ದರೆ – ಇಂದು ನಿರುದ್ಯೋಗಿ ಇಂಜಿನಿಯರುಗಳು, ವಿಜ್ಞಾನಿಗಳು ವಿದ್ವಾಂಸರುಗಳು ಇರಬೇಕಾಗಿರಲಿಲ್ಲ.

ಶಿಕ್ಷಣ ಪಡೆದವನು ತಾನೇ ಹೆಚ್ಚು ಅವಕಾಶ ಕಲ್ಪಿಸಿಕೊಳ್ಳುತ್ತಾ ಹೋಗಬಹುದು. ಆದರೆ, ಒಂದು ರೀತಿಯಲ್ಲಿ ಸರ್ಕಾರದಿಂದ ಆಗಬಹುದಾದ ಸಹಾಯವೆಂದರೆ ಇಂತಹ ಶಿಕ್ಷಣ ಪಡೆದವರಿಗೆ ಗ್ರಾಮಾಂತರ ಪ್ರದೇಶಗಳಲ್ಲಿ ಕ್ರಿಯಾಶೀಲ

ವಾಗಿ ಕೆಲಸ ಮಾಡಲು-ಅನುಕೂಲವಾದ ವಾತಾವರಣ ಅವಕಾಶ ದೊರಕಿಸಲು ಪ್ರಯತ್ನಿಸಬಹುದು.

ಇದು ರಾಷ್ಟ್ರೀಯ ರಂಗ ಶಾಲೆಯಿಂದ ಶಿಕ್ಷಣ ಪಡೆದ ಅಥವಾ ನೀನಾಸಂ ಸಂಸ್ಥೆ ಯಿಂದ ಶಿಕ್ಷಣ ಪಡೆದ ಎಷ್ಟು ಜನ ಸಕ್ರಿಯವಾಗಿ ಭಾಗವಹಿಸಲು ಅನುಕೂಲ ವಾಗಿದೆ!?

ಜಿಲ್ಲೆಗೊಂದು ರಂಗಮಂದಿರ-ಶಾಲೆ ಅನ್ನುವ ಕೂಗು ಆಗಾಗ್ಗೆ ಕೇಳಿ ಬಂದು ಅದು ಸಾಧ್ಯವೇ ಆದರೂ ಕೂಡ ಎಷ್ಟು ಜನ ಶಿಕ್ಷಣ ಪಡೆದವರಿಗೆ ಅವಕಾಶ ಆಗು ತ್ತದೆ?! ಇದನ್ನು ವೃತ್ತಿಯಾಗಿ ಸ್ವೀಕರಿಸಿ ಇದನ್ನೇ ತನ್ನ ಜೀವನಕ್ಕೆ ಅವಲಂಬಿ ಸುತ್ತೇನೆ ಅನ್ನುವವರು "ಅದರ ಆಗು ಹೋಗು – ಕಷ್ಟಸುಖಗಳನ್ನು" ಅರಿತೇ ಹೋಗಬೇಕು. ಪಟ್ಟಣಗಳಲ್ಲಿ ಹೆಚ್ಚಿನ ಅವಕಾಶ ಇರುವುದರಿಂದ ಬಹಳಷ್ಟು ಜನ ಗ್ರಾಮಾಂತರಗಳಿಗೆ ಹೋಗಲಿಚ್ಛಿಸುವುದಿಲ್ಲ. ಇಲ್ಲ ಅಲ್ಲಿಯ ಪಾಠಶಾಲೆಯಲ್ಲೊ ಇಲ್ಲ ಸ್ವಾವಲಂಬಿಯಾಗಿ ಯಾವುದಾದರೂ ಕಸುಬು ಮಾಡುತ್ತಾ, ನಾಟಕ ರಂಗ ದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ, ತಾನೂ ಸಮಾಧಾನ ಪಡೆಯುತ್ತಾ, ಇರ ಬಹುದೇನೋ, ದರಿದ್ರ 'ವ್ಯವಸ್ಥೆ' ಇರುವಾಗ ಸರ್ಕಾರದ ಉದ್ಯೋಗವನ್ನೇ ನಂಬಿ ಕೊಂಡಿರುವುದು ಸಾಧುವಲ್ಲ.

---

## "ರಂಗಭೂಮಿ ಪರಿಣತರ ಸಮಿತಿಯ ನಿರ್ಧಾರದಂತೆ ರಂಗ ಶಿಕ್ಷಣದ ರೂಪು ರೇಷೆ ಖಚಿತವಾಗಬೇಕು"

---

—ಜಿ. ವಿ. ಶಿವಾನಂದ

೧. ರಂಗಶಿಕ್ಷಣ ಶಾಲಾ-ಕಾಲೇಜುಗಳಿಗೆ ಕಡ್ಡಾಯವಾಗಬೇಕು.

ಪ್ರಾಥಮಿಕ ಶಾಲೆಗಳಲ್ಲಿ ರಂಗಕ್ರೀಡೆ, ಕವನಗಳ ಅಭ್ಯಾಸಕ್ಕೆ ಆದ್ಯತೆ ಕೊಡಬೇಕು. ಸಂಗೀತ ಮತ್ತು ಉಚ್ಚಾರಣೆಗಳ ಕಡೆ ಮಕ್ಕಳು ಹೆಚ್ಚು ಗಮನ ಕೊಡುವಂತಿರಬೇಕು.

ಮಾಧ್ಯಮಿಕ ಅಂದರೆ ೫ನೇ ತರಗತಿಯಿಂದ ೭ನೇ ತರಗತಿ ಪೂರ್ತ ವಿವಿಧ ದೈಹಿಕ ಅಭ್ಯಾಸ ಯೋಗಾಭ್ಯಾಸ, ಆಶುನಾಟಕಗಳು, ಮೂಕಾಭಿನಯಗಳ ಪರಿಚಯ ಮಾಡಬಹುದು.

೮ ರಿಂದ ೧೦ ನೇ ತರಗತಿಗಳಲ್ಲಿ ಹಿಂದಿನ ವಿಷಯಗಳಲ್ಲದೆ ರಂಗದ ವಿವಿಧ ವರ್ಣಾಲಂಕಾರ, ಕಿರುನಾಟಕಗಳ ಅಭ್ಯಾಸ, ನಾಟಕೋತ್ಸವಗಳಲ್ಲಿ ಪಾಲ್ಗೊಳ್ಳುವಿಕೆ.

ಪ್ರಿಯೂನಿವರ್ಸಿಟಿ ಹಂತದಲ್ಲಿ ಪಾಶ್ಚಾತ್ಯ, ಪೌರ್ವಾತ್ಯ ನಾಟಕಗಳ ಪರಿಚಯ ಭಾರತೀಯ ಸಂಸ್ಕೃತ ನಾಟಕಗಳು, ಭರತನಾಟ್ಯ ಶಾಸ್ತ್ರ, ಆಧುನಿಕ ರಂಗಭೂಮಿಗಳ ಬಗ್ಗೆ ವಿವರವಾಗಿ ಅಭ್ಯಾಸ ಮಾಡಬೇಕಾಗುವುದಲ್ಲದೆ ಮೂಕಾಭಿನಯ, ಆಶು ನಾಟಕ, ಏಕಾಂಕ ನಾಟಕಗಳ ತಯಾರಿಕೆಯಲ್ಲಿ ಪಾಲ್ಗೊಳ್ಳಬೇಕು.

ಡಿಗ್ರಿ ಹಂತದಲ್ಲಿ ಮೊದಲ ವರ್ಷದಲ್ಲಿ ರಂಗಭೂಮಿಯ ವಿವಿಧ ಭಾಗಗಳ ವಿವರವಾದ ಅಭ್ಯಾಸ ಮಾಡಿ ನಂತರದ ಎರಡು ವರ್ಷಗಳಲ್ಲಿ ಯಾವುದಾದರೂ ಒಂದು ವಿಷಯದಲ್ಲಿ ಪರಿಣತಿ ಪಡೆಯಬಹುದು.

೨. ರಂಗಶಿಕ್ಷಣಕ್ಕೂ ಪಠ್ಯಕ್ರಮವಿರಲೇಬೇಕು.

ಪ್ರಶ್ನೆ ಒಂದಕ್ಕೆ ಉತ್ತರಿಸಿದಂತೆ – ಅವುಗಳ ಪಠ್ಯಕ್ರಮ ರಚಿಸಲು ಒಂದು ಸಮಿತಿ ರಚಿಸಲ್ಪಟ್ಟು ಆ ಸಮಿತಿ ಪಠ್ಯಕ್ರಮ ರಚನೆ ತಯಾರಿಸಬೇಕು.

೩. 'ರಂಗ ಶಿಕ್ಷಣ' ಶಾಲಾ ಕಾಲೇಜುಗಳಿಗೆ ಕ್ರಮಬದ್ಧ ಗೊಳಿಸಿದರೆ

೧) ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲಾ ಹಂತಗಳಿಗೆ ಪಾಠ ಮಾಡಲು ಶಿಕ್ಷಕರು ಎಸ್.ಎಸ್.ಎಲ್.ಸಿ, ಟಿ.ಸಿ.ಹೆಚ್ ಮಾಡಿ ನೀನಾಸಂ ದಲ್ಲಿ ೧ ವರ್ಷ ತರಬೇತಿ ಪಡೆದಿರಬೇಕು.

೨) ಪಿ.ಯು.ಸಿ ಮತ್ತು ಡಿಗ್ರಿ ಹಂತದ ವಿದ್ಯಾರ್ಥಿಗಳಿಗೆ ಯಾವುದಾದರೂ ವಿಶ್ವವಿದ್ಯಾನಿಲಯದಲ್ಲಿ(ಆರ್ಟ್ಸ್) ಕಲಾ ವಿಭಾಗದ ಪದವೀಧರರಾಗಿದ್ದು ನೀನಾಸಂ ಅಥವಾ ರಂಗಾಯಣದಲ್ಲಿ ತರಬೇತಿ ಹೊಂದಿರಬೇಕಲ್ಲದೆ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯ ಪದವೀಧರರಾಗಿರಬೇಕು.

ಇದಕ್ಕೂ ಸಹ ಸಮಿತಿಯೊಂದು ನೇಮಕಗೊಂಡು ಅದರ ಮೂಲ್ಕ ರೂಪು ರೇಷೆಗಳು ಖಚಿತವಾಗಿ ರೂಪಿಸಬೇಕು.

೪. ರಂಗಭೂಮಿ ವಿಕೇಂದ್ರೀಕರಣವಾಗಿ ಗ್ರಾಮೀಣ ಪ್ರದೇಶಗಳಲ್ಲಿ ರಂಗ

ಕ್ರಿಯೆಗೆ ಪ್ರೋತ್ಸಾಹ ಆಶಾದಾಯಕವಾಗಿರುವ ಪರಿಸರದಲ್ಲಿ ರಂಗಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಮಂಡಲ ಪಂಚಾಯಿತಿ, ಜಿಲ್ಲಾ ಪರಿಷತ್ತುಗಳಿಂದ ಎಲ್ಲ ರೀತಿಯ ಬೆಂಬಲ, ಸಹಕಾರ ಅಗತ್ಯ. ಮಂಡಲ ಪಂಚಾಯಿತಿ, ಜಿಲ್ಲಾ ಪರಿಷತ್ತು ಈ ಬಗ್ಗೆ ಕೂಡಲೇ ಕಾರ್ಯಪ್ರವೃತ್ತರಾದರೆ ಮುಂದಿನ ವರ್ಷಗಳಲ್ಲಿ 'ರಂಗ ಶಿಕ್ಷಣ' ಕ್ಕೆ ಭದ್ರ ಬುನಾದಿ ಉಂಟಾಗಲು ಅನುಕೂಲವಾಗುತ್ತದೆ. ಇದು ರಂಗ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ – ಅವರ ಬದುಕಿಗೆ ಒಂದು ಆಶಾಕಿರಣ. ಖಂಡಿತ ವಾಗಿ ಸಮರ್ಥನೀಯ.

# ರಂಗಶಿಕ್ಷಣ : ಕಾರ್ಯಾಗಾರದ ಪ್ರಾಮುಖ್ಯತೆ

—ಡಾ|| ಸಿಂಧುವಳ್ಳಿ ಅನಂತಮೂರ್ತಿ

ಕಲಾವಿಲಾಸಿ ರಂಗದಲ್ಲಿಯೇ ಆಗಲೀ, ಹವ್ಯಾಸಿ ರಂಗದಲ್ಲಿಯೇ ಆಗಲಿ ರಂಗಶಿಕ್ಷಣ ಎನ್ನುವ ಕ್ರಮ ಇರಲಿಲ್ಲ. ಏನಿದ್ದರೂ ೧೯೬೦ ರ ನಂತರವೇ ಬಂದದ್ದು. ಇದು ಪಾಶ್ಚಾತ್ಯ ಪ್ರಭಾವ ಎಂದು ಸಾಮಾನ್ಯವಾಗಿ ಹೇಳುತ್ತೇವೆ. ಕರ್ನಾಟಕದಲ್ಲಿ ಮೊದಲ ಬಾರಿಗೆ ಮೈಸೂರು ವಿಶ್ವವಿದ್ಯಾನಿಲಯ ನಾಟಕ ವಿಭಾಗ ತೆರೆಯಿತು. ನಂತರ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ. ನನ್ನನ್ನು ಈ ಸಭೆಗೆ ಪರಿಚಯ ಮಾಡುತ್ತಾ ವಿಜಯಾ, 'ನಾನು ವಿಶ್ವವಿದ್ಯಾನಿಲಯದಲ್ಲಿ ವಿಶಿಷ್ಟ ರೀತಿಯಲ್ಲಿ ಕೆಲವು ಕೆಲಸಗಳನ್ನು ಮಾಡಿದೆ' ಎಂದು ಹೇಳಿದರು. ಅದಕ್ಕೆ ನಮ್ಮ ಯೋಗಾನರಸಿಂಹ ಸಾಕ್ಷಿ. ರಂಗಶಿಕ್ಷಣ ಎಂದಾಗ ವಿಶ್ವವಿದ್ಯಾನಿಲಯ ಅದಕ್ಕೆ ವಿಶಿಷ್ಟ ರೀತಿಯಲ್ಲಿ ಸಿದ್ಧವಾಗಬೇಕಾಗುತ್ತದೆ. ಮೈಸೂರು ವಿಶ್ವವಿದ್ಯಾನಿಲಯ ಈ ದಿಕ್ಕಿನಲ್ಲಿ ಕೆಲವು ಯೋಜನೆಗಳನ್ನು ಹಾಕಿಕೊಂಡಿತು. ಉದಾಹರಣೆಗೆ ಇತ್ತೀಚೆಗೆ ಗುಬ್ಬಿ ವೀರಣ್ಣ ರಂಗದ ಆಶ್ರಯದಲ್ಲಿ "ಕರ್ನಾಟಕ ವೃತ್ತಿ ರಂಗಭೂಮಿ ನೂರು ವರ್ಷ- ವೀಡಿಯೋ ಚಿತ್ರೀಕರಣ" ಎಂಬ ಒಂದು ಯೋಜನೆ. ಇನ್ನೊಂದು ಯೋಜನೆಯೆಂದರೆ ವೃತ್ತಿರಂಗದ ಗೀತೆಗಳ ಪರಿಷ್ಕರಣ ಹಾಗೂ ಮುದ್ರಣ. ಇಲ್ಲಿ ಕೊಟ್ಟಿರುವ ಎರಡು ಉದಾಹರಣೆಗಳು ರಂಗಕ್ಕೆ ಸಂಬಂಧಿಸಿದಂತೆ ಶಿಕ್ಷಣ ನೀಡಲು ಸಹಕಾರಿಯಾಗುತ್ತವೆ. ಹೀಗೆ ಒಂದು ವಿಶ್ವವಿದ್ಯಾನಿಲಯ ಹಮ್ಮಿಕೊಂಡದ್ದನ್ನು, ಸಂಬಂಧಿಸಿದ ಇತರ ಸಂಸ್ಥೆಗಳೂ ಈ ಬಗೆಯ ಯೋಜನೆಗಳನ್ನು ಹಾಕಿಕೊಂಡಲ್ಲಿ, ಈ ಶಿಕ್ಷಣ ನೀಡಲು ಸಹಕಾರಿಯಾಗುತ್ತವೆ.

೧೯೬೦-೯೦ರ ಅವಧಿಯಲ್ಲಿ ಹವ್ಯಾಸಿ ರಂಗದಿಂದ ಆಗಿರುವ ಕೆಲಸ ಸಾಕಷ್ಟು ಸಮಾಧಾನ ತಂದಿದೆಯಾದರೂ ಆಗಬೇಕಾದ ಕಲಸ ಸಾಕಷ್ಟಿದೆ. ಇದೆಲ್ಲಾ ಆಗಬೇಕಾದ, ಆಗುತ್ತಲೇ ಇರಬೇಕಾದ ಅಂದರೆ ನಿರಂತರವಾಗಿ ನಡೆಯುತ್ತಲೇ ಇರಬೇಕಾದ ಕೆಲಸ. ನೀನಾಸಂ ತಿರುಗಾಟ, ಅಕಾಡಮಿಯ ಉತ್ಸವಗಳು, ಕಾರ್ಯಾಗಾರಗಳು, ವಿಶ್ವವಿದ್ಯಾನಿಲಯಗಳಲ್ಲಿ ನಡೆದಿರುವ ಚಟುವಟಿಕೆಗಳು, ರಂಗಾಯಣದ

ಚಟುವಟಿಕೆಗಳು ಹವ್ಯಾಸಿ ತಂಡಗಳು ನಡೆಸಿಕೊಂಡು ಬಂದಿರುವ-ಕಾರ್ಯಾಗಾರಗಳು ಇವೇ ಮೊದಲಾದವುಗಳು ಸ್ವಲ್ಪ ಮಟ್ಟಿಗೆ ಸಮಾಧಾನ ತಂದಿವೆ. ಕೆಲವು ವರ್ಷಗಳ ಹಿಂದಿನ ತನಕ ಭಾರತ ಸರ್ಕಾರ ವಿಶ್ವವಿದ್ಯಾನಿಲಯದ ಅಧ್ಯಾಪಕರುಗಳಿಗಾಗಿ, ದೇಶದ ಬೇರೆ ಬೇರೆ ಭಾಗಗಳಲ್ಲಿ ಆರರಿಂದ ಎಂಟು ವಾರಗಳ ಕಾರ್ಯಾಗಾರವನ್ನು ವರ್ಷಕ್ಕೆ ಒಮ್ಮೆ ನಡೆಸುತ್ತಿತ್ತು. ಇಂಥಾ ಒಂದು ಕಾರ್ಯಾಗಾರ ಒಂದು ವರ್ಷ ಮೈಸೂರಿನಲ್ಲಿ ನಡೆಯಿತು. ಹಬೀಬ್ ತನ್ವೀರ್ ಇದರ ನಿರ್ದೇಶಕರಾಗಿದ್ದರು. ಇದರಲ್ಲಿ ಒಂದೊಂದು ವಿಶ್ವ ವಿದ್ಯಾನಿಲಯದಿಂದ ಒಬ್ಬೊಬ್ಬ ಅಧ್ಯಾಪಕರು ಭಾಗವಹಿಸಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ನಾನು ಆಯ್ಕೆಗೊಂಡಿದ್ದೆ. ಬೆಳಗಿನಿಂದ ರಾತ್ರಿ ೧೦-೧೧ ಘಂಟೆಯ ವರೆಗೂ ಒಂದಲ್ಲ ಒಂದು ಚಟುವಟಿಕೆಯಲ್ಲಿ ಶಿಕ್ಷಣಾರ್ಥಿಗಳು ನಿರತರಾಗುತ್ತಿದ್ದರು. ಕಾರ್ಯಾಗಾರದ ಕೊನೆಯ ಭಾಗದಲ್ಲಿ ಗಾರ್ಸಿಯಲೋರ್ಕ್ನಾನ 'ಶೂ ಮೇಕರ್ಸ್ ಪ್ರಿಜೇಡಿಯಸ್ ವೈಫ್' ನಾಟಕ ಪ್ರದರ್ಶನಗೊಂಡಿತು. ಹೀಗೆ ಇಲ್ಲಿ ಭಾಗವಹಿಸಿದವರಿಗೆ ರಂಗ ಪ್ರಯೋಗದ ಎಲ್ಲ ಅಂಗಗಳಲ್ಲೂ ಪ್ರವೇಶವಾಯಿತು. ಕಾರ್ಯಾಗಾರದಲ್ಲಿ ಭಾಗವಹಿಸಿದವರು ಅಲ್ಲಿನ ಶಿಸ್ತಿಗೂ ಒಳಪಡಬೇಕಾಯಿತು. ಕಾರ್ಯಾಗಾರದ ಸ್ಥಳ ನಮ್ಮ ಮನೆಗೆ ಬಹಳ ಸಮೀಪವಾಗಿದ್ದರೂ, ನಾನೂ ಕೂಡ ಎಲ್ಲಾ ಶಿಕ್ಷಣಾರ್ಥಿಗಳೊಡನೆಯೇ ವಾಸಿಸಬೇಕಾಗಿತ್ತು. ಈ ಒಂದು ಬಗೆಯ ಕಾರ್ಯಾಗಾರದಿಂದ ಶಿಸ್ತು ಎಂದರೆ ಏನು ಎಂದು ತಿಳಿದುಕೊಳ್ಳುವುದೇ ಅಲ್ಲದೆ ಎಲ್ಲ ಪ್ರಯೋಗಾಂಗಗಳ ಪರಿಚಯವೂ ಆಗುತ್ತಿತ್ತು. ಇಂತಹದೇ ಇನ್ನೊಂದು ನಿದರ್ಶನವೆಂದರೆ, ಶ್ರೀರಂಗರ ಪ್ರೌಢಶಾಲಾ ಶಿಕ್ಷಕರಿಗೆ, ಪ್ರಧಾನವಾಗಿ **NSD**ಯಲ್ಲಿ ಶಿಕ್ಷಣ ಕಲಿತವರಿಂದ ಬೆಂಗಳೂರಿನಲ್ಲಿ ವರ್ಷಕ್ಕೊಮ್ಮೆ ಕಾರ್ಯಾಗಾರ ನಡೆಸುತ್ತಿದ್ದುದು. ಈ ಕಾರ್ಯಾಗಾರಗಳು ಕೆಲವು ವರ್ಷ ನಡೆದವು. ಇಲ್ಲಿ ಕಲಿತ ಶಿಕ್ಷಕರು ಹಿಂದಿರುಗಿ ತಾವು ಕಲಿಸುತ್ತಿದ್ದ ಶಾಲೆಗಳಲ್ಲಿ ನಾಟಕಗಳನ್ನು ಪ್ರಯೋಗಿಸಲು ಈ ಬಗೆಯ ಕಾರ್ಯಾಗಾರವು ನೆರವಾದವು. ಈ ಹೊತ್ತು ವಿಶ್ವವಿದ್ಯಾನಿಲಯದ ಅಧ್ಯಾಪಕರುಗಳಿಗಾಗಲಿ, ಪ್ರೌಢಶಾಲಾ ಅಧ್ಯಾಪಕರುಗಳಿಗಾಗಲಿ ಇಂತಹ ಕಾರ್ಯಾಗಾರಗಳು ನಡೆಯುತ್ತಿಲ್ಲ. ಇದರಿಂದ ಬಹಳ ಅನ್ಯಾಯವಾಗಿದೆ. ಇವು ನಿರಂತರವಾಗಿ ನಡೆಯುವಂತೆ ಸಂಬಂಧಪಟ್ಟವರು ಗಮನ ಹರಿಸಬೇಕಾಗಿದೆ.

ನಮ್ಮ ಪರಿಸರಕ್ಕೆ ಒಪ್ಪುವಂತಹ ಶಾಲಾಕಾಲೇಜುಗಳಲ್ಲಿನ ರಂಗಶಿಕ್ಷಣ ಹೇಗಾಗಬೇಕು ಎಂಬುದರ ಬಗೆಗೆ ನಾಲ್ಕು ಮಾತು.

ಶಾಲಾ ಕಾಲೇಜುಗಳಲ್ಲಿ ಒಂದು ಸಾಮಾನ್ಯ ವಿಷಯವಾಗಿ ರಂಗಶಿಕ್ಷಣ ಇರಬೇಕು. ಅಂದರೆ ಎರಡು ಭಾಷೆಗಳನ್ನು ಬಿಟ್ಟು ಇರುವ ಐಚ್ಛಿಕ ವಿಷಯಗಳಲ್ಲಿ

ಒಂದು ವಿಷಯವಾಗಿ ನಾಟಕ ಶಾಸ್ತ್ರ ಇರಬೇಕು. ಅಲ್ಲದೆ ಬೇರೆ ಬೇರೆ ಪದವಿಗಳಲ್ಲಿ ಅಭ್ಯಾಸ ಮಾಡುತ್ತಿರುವವರು ಸಂಜೆ ವೇಳೆ ನಡೆಯುವ ಡಿಪ್ಲೊಮಾದಲ್ಲಿ ಅಭ್ಯಾಸ ಮಾಡಲು ಅವಕಾಶವಿರಬೇಕು. ನಂತರ ತಮ್ಮನ್ನು ಹವ್ಯಾಸಿ ರಂಗದಲ್ಲಿ ತೊಡಗಿಸಿ ಕೊಂಡವರು ರಂಗದಲ್ಲಿ ವೃತ್ತಿಪರತೆಯನ್ನು ತಂದುಕೊಂಡು ಕೆಲಸಮಾಡಬಹುದು.

ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ರಂಗಕ್ಕೆ ಪೂರ್ಣವಾಗಿ ತೊಡಗಿಸಿಕೊಂಡ ಸಂಸ್ಥೆಗಳಲ್ಲಿ ವಿಶಿಷ್ಟ ರೀತಿಯಲ್ಲಿ ರಂಗಶಿಕ್ಷಣ ಇರಬೇಕು. ಇದರಿಂದ ಹೊರಬಂದ ವಿದ್ಯಾರ್ಥಿಗಳು ರಂಗದ ಕೆಲಸವನ್ನು ವೃತ್ತಿಯಾಗಿ ಕೈಗೊಳ್ಳುವಂತಿರಬೇಕು. ರಂಗ ಭೂಮಿಯಲ್ಲೇ, ರಂಗಭೂಮಿಗಾಗಿಯೇ, ರಂಗದ ಏಳಿಗೆಗಾಗಿಯೇ ಅಂಥವರು ಜೀವನಪರ್ಯಂತ ದುಡಿಯಬಹುದು.

ಈ ಎರಡೂ ರೀತಿಯಲ್ಲಿ ಶಿಕ್ಷಣವಾದರೆ ಹೆಚ್ಚು ಅನುಕೂಲವಾಗಬಹುದು, ಸ್ವಲ್ಪ ತಿಳಿದುಕೊಳ್ಳುವವನು ಅಷ್ಟೇ ತಿಳಿದುಕೊಳ್ಳಲಿ, ಪಂಡಿತನಾಗುವವನು ಪಂಡಿತನಾಗಲಿ. ಆಗ ರಂಗಭೂಮಿಗೆ ಅನುಕೂಲವಾಗುತ್ತದೆ. ನಮ್ಮ ವಿಶ್ವ ವಿದ್ಯಾಲಯಗಳು ಸಂಶೋಧನೆಗೂ ಹೆಚ್ಚು ಗಮನ ಕೊಡಬೇಕು. ಹಾಗೆಯೇ ಪ್ರಕಟಣೆಗಳ ಕಡೆಗೂ. ರಂಗಶಿಕ್ಷಣದ ಬಗೆಗೆ ಬಹಳ ವಿಶಾಲವಾಗಿ ಯೋಚನೆ ಮಾಡಬೇಕು, ಸಂಕುಚಿತವಾಗಬಾರದು. ವಿಶ್ವವಿದ್ಯಾನಿಲಯಗಳಲ್ಲಿ ವಿಶಿಷ್ಟ ರೀತಿ ಯಲ್ಲಿ ಈ ಶಿಕ್ಷಣವನ್ನು ಕಲಿಸುವ ಸಂದರ್ಭದಲ್ಲಿ ಸಾಮಾನ್ಯ ವಿಷಯವನ್ನು ಕಲಿಸು ವಂತೆ ಕಲಿಸಬಾರದು. ವಿಭಾಗದ ಸೀಮಿತ ಸಂಖ್ಯೆಯಲ್ಲಿ ಅಧ್ಯಾಪಕರಿದ್ದು, ರಂಗಕ್ಕೆ ಸಂಬಂಧಿಸಿದ ಬೇರೆ ಬೇರೆ ರಂಗದಲ್ಲಿ ದುಡಿಯುತ್ತಿರುವವರನ್ನು ಬರ ಮಾಡಿಕೊಂಡು, ಅವರಿಂದ ವಿದ್ಯಾರ್ಥಿಗಳಿಗೆ ಪಾಠ ಹೇಳಿಸಬೇಕು. ಉದಾಹರಣೆಗೆ ರಂಗಸಜ್ಜಿಕೆ, ಬೆಳಕಿನ ವ್ಯವಸ್ಥೆ, ಉಡಿಗೆ, ತೊಡಿಗೆ, ನಿರ್ದೇಶನ ಇವೇ ಮೊದಲಾದ ವಿಷಯಗಳಲ್ಲಿ ಅಂಥವರಿಂದ ಪಾಠ ಹೇಳಿಸಿದಲ್ಲಿ ಒಂದೇ ಸಂಸ್ಥೆಯಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಬಹಳ ಲಾಭದಾಯಕವಾಗುತ್ತವೆ.

(ಕರ್ನಾಟಕ ನಾಟಕ ಅಕಾಡೆಮಿ ಮತ್ತು ನಾಟಕರತ್ನ ಡಾ॥ ಗುಬ್ಬಿ ವೀರಣ್ಣ ಸಮಿತಿ ಪ್ರಕಟಿಸಿರುವ 'ರಂಗ ಚಿಂತನೆ' ಕೃತಿಯಲ್ಲಿ 'ರಂಗ ಶಿಕ್ಷಣ' ಕುರಿತ ವಿಚಾರ ಸಂಕೀರ್ಣದಲ್ಲಿ ಡಾ॥ ಸಿಂಧುವಳ್ಳಿ ಅನಂತಮೂರ್ತಿ ಅವರ ಅಧ್ಯಕ್ಷ ಭಾಷಣದ ಆಯ್ದ ಭಾಗ).

# ಡಾ|| ರಾಳ್ಳಪಲ್ಲಿ ಅನಂತಕೃಷ್ಣಶರ್ಮ

—ಹರಿಹರಪ್ರಿಯ

ಡಾ|| ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಅವರ "ಗಾನಕಲೆ" ಹಾಗೂ "ಸಾಹಿತ್ಯ ಮತ್ತು ಜೀವನಕಲೆ" ಕುರಿತು ಒಂದು ಪ್ರಬಂಧ ಮಂಡಿಸಲು ಗೆಳೆಯ ಮೈಸೂರು ಸುಬ್ರಹ್ಮಣ್ಯ ಅವರು ಆಹ್ವಾನಿಸಿದ್ದಾರೆ.

ಒಪ್ಪಿದ್ದಕ್ಕೆ ಕಾರಣಗಳು ಮೂರು.

ಒಂದು : ರಾಳ್ಳಪಲ್ಲಿಯವರ ಬಗ್ಗೆ ಪೂರ್ವದಿಂದ ಇರುವ ಗೌರವ. ಅವರ ಮೂರ್ತಿ, ಪಲುಕು, ಹೃದಯ – ಸುಪ್ರಸನ್ನವಾದುವು. ಇವತ್ತಿಗೆ ವಿರಳವಾದವು. ಗೌರವವರ್ಣ, ಗೌರವವಾಕ್ಕು, ಗೌರವ ವ್ಯಕ್ತಿತ್ವ ಎಂದರೆ ರಾಳ್ಳಪಲ್ಲಿಯವರೆ ಎಂಬ ಪ್ರತೀತಿ. ಈ ಯುಗದ ಶ್ರೇಷ್ಠ ಕೊಳಲುವಾದಕ ಟಿ.ಆರ್.ಮಹಾಲಿಂಗಂ ಬಂದದ್ದು ಮಾತ್ರವೇ ಅಲ್ಲ, ತೂರಾಡಿಕೊಂಡು ಬಂದರೂ ವೇದಿಕೆ ಏರುವ ಮುನ್ನ, ಸಭೆಯಲ್ಲಿದ್ದ ರಾಳ್ಳಪಲ್ಲಿಯವರ ಕಾಲು ಮುಟ್ಟಿ ನಮಸ್ಕರಿಸಿದ್ದನ್ನು ೭೦ ರ ದಶಕದಲ್ಲಿ, ಗಾಯನ ಸಮಾಜದಲ್ಲಿ ಪತ್ಯಕ್ಷ ಕಂಡಿದ್ದೇನೆ. ಆಂಧ್ರದ ಸೌಂದರ್ಯ ಆರಾಧಕ ಡಾ|| ಸಂಜೀವ್‌ದೇವ್, ವಿಚಾರವಾದಿ ಡಾ|| ವಿ. ಆರ್. ನಾರ್ಲ ಅವರು – ರಾಳ್ಳಪಲ್ಲಿಯವರನ್ನು ಕಂಡು ಮಾತಾಡಲು ತವಕಿಸಿದಾಗ, ಎರಡು ಬಾರಿಯೂ ಕರೆದುಕೊಂಡು ಹೋಗಿದ್ದೆ. ಇಂತಹ ನೆನಪುಗಳು ರಾಳ್ಳಪಲ್ಲಿ ಹೆಸರಿನೊಂದಿಗೆ ಹಲವು.

ಎರಡನೆಯದು : ರಾಳ್ಳಪಲ್ಲಿ ಯವರ "ಸಾಹಿತ್ಯ ಮತ್ತು ಜೀವನಕಲೆ", ನಾನು 'ಕನ್ನಡ ಜಾಣ' ಪರೀಕ್ಷೆಗಾಗಿ ಓದುವಾಗ ೭೦ ರ ದಶಕದಲ್ಲಿ ಪಠ್ಯಪುಸ್ತಕವಾಗಿತ್ತು.

ಕೊನೆಯದಾಗಿ; ವಿಮರ್ಶಕರಾದ ಮೈಸೂರು ಸುಬ್ರಹ್ಮಣ್ಯ ಕರೆದಿದ್ದಾರೆ. ೨೪ ನೇ, ಕರ್ನಾಟಕ ಗಾನಕಲಾ ಪರಿಷತ್ತಿನ ಸಂಗೀತ ವಿದ್ವಾಂಸರ ಸಮ್ಮೇಳನ

ಇನಾಗಿವೆ. ಎಲ್ಲಕ್ಕೂ ಮುಖ್ಯ, ನಾನು ಅಭಿಮಾನ ಪಡುವ ಕುಕ್ಕೆ ಸುಬ್ರಹ್ಮಣ್ಯದ ಕಲಾವಿದರಾದ ವಿದ್ಯಾಭೂಷಣ ತೀರ್ಥಸ್ವಾಮಿ ಅವರ ಸಾನ್ನಿಹಿತ್ಯ.

ಇವೆಲ್ಲವೂ ಈ ಕೆಲಸಕ್ಕೆ ಪ್ರೇರಣೆ ನೀಡಿವೆ. ಹೀಗಾಗಿಯೇ ಬರೆಯುವ ಮಾತು ಇರಲಿ, ಮಾತು ಆಡುವುದು ಕೂಡಾ ಕಷ್ಟಕರವಾಗಿ ಕಾಣುತ್ತಿದೆ. ಕಷ್ಟ ಅನ್ನುವುದು ಇಲ್ಲಿ ಅಷ್ಟು ಸರಿಯಲ್ಲ. ವಿಷಯ ಗ್ರಹಿಕೆಗೆ ಪೂರ್ಣ ಸಿಗಲಾರದ ತೊಡಕು ಉಂಟಾಗುತ್ತಿದೆ ಎನ್ನಿಸಿದೆ. ಏಕೆ ಹೀಗಾಗುತ್ತಿದೆ? ಹೀಗಾಗಲು ಕಾರಣ ಏನಿರಬಹುದು? ಎಂಬುದನ್ನೆ ನಿಮ್ಮಲ್ಲಿ ತೋಡಿಕೊಳ್ಳಲು ಬಯಸುತ್ತಿರುವೆ. ನೀವು ನನ್ನ ನೆರವಿಗೆ ಬರಬೇಕು ಎಂಬ ಕೋರಿಕೆಯೊಂದಿಗೆ ಮುಂದುವರಿಯುತ್ತೇನೆ.

ರಾಳ್ಳಪಲ್ಲಿಯವರು ಕನ್ನಡಕ್ಕೆ ಕೊಟ್ಟಿರುವ ಈ ಎರಡೂ ಪುಸ್ತಕಗಳು ಬೇರೆ ಬೇರೆಯಾಗಿಯೇ ನೋಡಬೇಕಾದವು. ಕೇವಲ ವಿಷಯದ ದೃಷ್ಟಿಯಿಂದ ಈ ಮಾತು ಹೇಳುತ್ತಿರುವೆ. (ಈ ಎರಡು ಪುಸ್ತಕವಲ್ಲದೆ, ನಾ.ಕಸ್ತೂರಿ ಹಾಗೂ ಎಲ್. ಗುಂಡಪ್ಪ ಅವರ ಜೊತೆ ೧೯೫೯ರಲ್ಲಿ "ದಕ್ಷಿಣ ಭಾಷಾ ಕಥಾಮಂಜರಿ" ಎಂಬ ಪುಸ್ತಕವನ್ನು ರಾಳ್ಳಪಲ್ಲಿ ಅನುವಾದಿಸಿದ್ದಾರೆ. ಇದರಲ್ಲಿ ಅವರ ಆಯ್ಕೆ-ಅಭಿರುಚಿ ವಿಶೇಷತೆಯಾಗಲಿ ಏನೂ ಇಲ್ಲ ಆದ್ದರಿಂದ ಈ ಪ್ರಬಂಧದಲ್ಲಿ ಆ ಕುರಿತು ವಿಚಾರ ಮಾಡಿಲ್ಲ.)

"ಗಾನಕಲೆ", ಸಂಗೀತ ಮಾಧ್ಯಮ ಕುರಿತ ಲೇಖನಗಳ ಸಂಗ್ರಹ. "ಸಾಹಿತ್ಯ ಮತ್ತು ಜೀವನಕಲೆ" ಸಾಹಿತ್ಯ ಮಾಧ್ಯಮ ಕುರಿತ ಲೇಖನಗಳ ಸಂಗ್ರಹ, ಈ ಮಾತು ಕೂಡ ಸ್ಥೂಲವಾಗಿ ಹೇಳುತ್ತಿರುವೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು : ಒಂದೆರಡು ವರ್ಷಗಳ ಅಂತರದಲ್ಲಿ ಎಂದರೆ ೫೦ ರ ದಶಕದಲ್ಲಿ ಈ ಪುಸ್ತಕಗಳು ಪ್ರಕಟವಾಗಿವೆ. ಆದರೆ ಬರೆದಿರುವ ಕಾಲ ಪರಿಗಣಿಸಿದರೆ, ವೀಣೆ ಶೇಷಣ್ಣನವರು ತೀರಿಕೊಂಡ ಸಂದರ್ಭ ೧೯೨೬ ರಿಂದ, ಬೆಂಗಳೂರು ಗಾಯನ ಸಮಾಜದ ಆಶ್ರಯದಲ್ಲಿ ನಡೆದ ದ್ವಿತೀಯ ಸಂಗೀತ ಸಮ್ಮೇಳನದ ಅಧ್ಯಕ್ಷ ಭಾಷಣವಾಗಿ ೧೯೭೦ರವರೆಗೆ ಬರೆದವು ಹಾಗೂ ಮಾಡಿದ ಭಾಷಣಗಳು—ಇವಾಗಿವೆ. ಅಲ್ಲಿಗೆ ಸುಮಾರು ೫ ದಶಕಗಳ ಫಲಿತ ಈ ಕೃತಿಗಳು.

"ಗಾನಕಲೆ" ಯ ಹೆಚ್ಚಿನ ಲೇಖನಗಳು ತೆಲುಗಿನಲ್ಲೇ ಬರೆದವು. ತೆಲುಗಿನವರನ್ನೇ ಉದ್ದೇಶಿಸಿ ಮಾತಾಡಿದವು. ಆದರೆ ಇವತ್ತಿಗೂ ತೆಲುಗಿನಲ್ಲಿ ಪುಸ್ತಕ

ರೂಪದಲ್ಲಿ ಬಾರದೇ ಇರುವುದು ಪರಮ ಸೋಜಿಗ. ಕನ್ನಡದವರ ಪಾಲಿಗೆ ಅದೃಷ್ಟದ ಹಾಗೂ ಹೆಮ್ಮೆಯ ಸಂಗತಿ.

"ಸಾಹಿತ್ಯ ಮತ್ತು ಜೀವನಕಲೆ" ಲೇಖನಗಳಲ್ಲಿ ಹೆಚ್ಚಿನವು ತೆಲುಗಿನಲ್ಲಿ ಬರೆದವು. ತೆಲುಗು ಸಾಹಿತ್ಯ ಕುರಿತು ಬರೆದಂಥವು ತೆಲುಗಿನಲ್ಲಿ ಪ್ರಕಟವಾಗಿರುವ ಪುಸ್ತಕಗಳಲ್ಲಿ ಸೇರ್ಪಡೆ ಆಗಿರುವುದು.

ಇದಿಷ್ಟು ವಿವರಣೆಗಾಗಿ ಕೊಟ್ಟದ್ದು. ನನ್ನ ಕಷ್ಟ ಏನು ಎಂಬುದನ್ನು ಈಗ ಎತ್ತುವೆ : ೧೯೨೬ ರಿಂದ ೭೦ ವರೆಗೆ ಬರೆದ ಈ ಲೇಖನವನ್ನು ಗ್ರಹಿಸುವುದು ಯಾವ ನೆಲೆಗಟ್ಟಿನ ಮೇಲೆ?

ರಾಳ್ಳಪಲ್ಲಿಯವರ ಒಟ್ಟಾರೆ ವಿಚಾರಧಾರೆ ಎಂದು ಹಿಡಿಯುವುದಾದರೆ ೫೦ ವರ್ಷಗಳಲ್ಲಿ, ಅವರಲ್ಲಿ ಬೆಳವಣಿಗೆ ಆಗಿಯೇ ಇಲ್ಲವೆ? ಎಂಬ ಪ್ರಶ್ನೆ ಎದುರಾಗುತ್ತದೆ. ತ್ಯಾಗರಾಜರ ಕೃತಿ ರಚನೆಯನ್ನು ಹೀಗೆ ತಪ್ಪಾಗಿ ಗ್ರಹಿಸಿ. ರಾಳ್ಳಪಲ್ಲಿಯವರು ಒಂದು ಕಡೆ ಎಡವಿದ್ದಾರೆ ಎಂದೇ ನನ್ನ ಭಾವನೆ.

ಹೌದು, ಬೆಳವಣಿಗೆಯ ಆಧಾರದಿಂದಲೇ ಗ್ರಹಿಸಬೇಕು ಎನ್ನುವುದಾದರೆ ಆ ಕಾಲದ ಇತರ ವಿಮರ್ಶಕರ ವಿಚಾರಧಾರೆಯೊಂದಿಗೆ ಇಟ್ಟು ನೋಡದೇ ಹೋದರೆ, ರಾಳ್ಳಪಲ್ಲಿಯವರಿಗೆ, ಆ ಮೂಲಕ ಆಗಿನ ಕಾಲದ ವಿಮರ್ಶೆಗೆ ಸಲ್ಲಿಸಿದಂತೆ ಆಗಲಾರದು.

ಹೀಗೆಂದು ಹೊರಟರೆ : ರಾಳ್ಳಪಲ್ಲಿಯವರು ಬದುಕಿದ್ದ ಕರ್ನಾಟಕದ ಪರಿಸರ ತೆಗೆದುಕೊಳ್ಳಬೇಕೊ? ಉದ್ದೇಶಿಸಿ ಬರೆದ ಆಂಧ್ರದ ಪರಿಸರ ತೆಗೆದುಕೊಳ್ಳಬೇಕೊ?– ಎಂಬ ಸಮಸ್ಯೆ ಎದುರಾಗುತ್ತದೆ.

ರಾಳ್ಳಪಲ್ಲಿಯವರ ನಿಜವಾದ ಓದುಗರು – ಕೇಳುಗರು ತೆಲುಗಿನವರಾಗಿದ್ದು, ಅನುವಾದದಲ್ಲಿ ಕಾಣುವ ಕನ್ನಡಿಗರು ವಿಚಾರ ಮಾಡತೊಡಗಿದರೆ– ಇದು ಚರ್ಚೆಯ ನೆಲೆಗೆ ನೇರ ಸಹಕಾರಿಯಾದೀತೊ? ಎಂಬ ಅಳುಕು ಕೂಡ ನನ್ನಲ್ಲಿ ಏಳುತ್ತಿದೆ.

ಸಾಹಿತ್ಯ ವಿಮರ್ಶಕರಾಗಿ ಆಂಧ್ರದಲ್ಲಿ ರಾಳ್ಳಪಲ್ಲಿಯವರಿಗೆ ಮೊದಲ ಮಣೆ ಇದೆ. ನವೋದಯ ಕಾಲದ ಪ್ರಮುಖರು ಅವರು. ಆದರೆ ಕನ್ನಡ ಸಂದರ್ಭದಲ್ಲಿ ಟಿ. ಎಸ್. ವೆಂಕಣ್ಣಯ್ಯ, ಏ.ಸೀ., ಕುವೆಂಪು, ತಿ.ನಂ.ಶ್ರೀ, ಸಿದ್ದವ್ವನಹಳ್ಳಿ ಕೃಷ್ಣಶರ್ಮ – ಅವರಂತಹ ನವೋದಯ ಬರಹಗಾರರ "ಗುರು"

ವೆಂದು ರಾಳ್ಳಪಲ್ಲಿಯವರಿಗೆ ಮರ್ಯಾದೆ ಇದೆಯೇ ಹೊರತು, ಸಾಹಿತ್ಯ ವಿಮರ್ಶಕರಾಗಿ ಏನೇನೂ ಸ್ಥಾನವಿಲ್ಲ, ಕೊಡುಗೆಯೂ ಇಲ್ಲ.

ಆದರೂ ೪-೫ ದಶಕಗಳ ಕಾಲ ಕರ್ನಾಟಕದ ಹೃದಯ ಸ್ಥಾನವಾದ ಮೈಸೂರಿನಲ್ಲಿಯೇ ರಾಳ್ಳಪಲ್ಲಿಯವರು ಇದ್ದರು – ಪಾಠವನ್ನೂ ಹೇಳಿದರು ಎಂಬುದು ನಿಜ. ದೇಹ ಇಲ್ಲಿ ಮನಸ್ಸು ಹೃದಯಗಳು ಅಲ್ಲಿ. ಹೀಗೆ ಆಗಬಾರದು ಎಂದಿಲ್ಲ ; ಆರ್.ಕೆ. ನಾರಾಯಣ ಕನ್ನಡಿಗರೆ. ಬರೆಯುವುದು ಇಂಗ್ಲೀಷಿನಲ್ಲಿ. ವಿಷಯ ವಸ್ತು ಕನ್ನಡವೆ. ಆದರೆ ಅವರಿಗೆ ಸಹೃದಯರು ಇಂಗ್ಲಿಷ್ ಭಾಷಿಕರು. ಹೀಗೆಯೇ, ರಾಳ್ಳಪಲ್ಲಿಯವರು ಕನ್ನಡನಾಡಿನಲ್ಲಿದ್ದು, ತೆಲುಗು ಸಾಹಿತ್ಯ ಕುರಿತು ಕನ್ನಡದಲ್ಲಿ ಬರೆದದ್ದು ಬಹಳ ಕಡಿಮೆ. ತೆಲುಗು ಸಾಹಿತ್ಯ ಕುರಿತು ತೆಲುಗು ಜನತೆ ಕುರಿತು ತೆಲುಗಿನಲ್ಲೇ ಬರೆದರು. ಇವು ಕನ್ನಡಕ್ಕೆ ಅನುವಾದವಾಗಿ ಬಂದವು ಹೀಗಾಗಿ ಅವರು ಅನುವಾದದಲ್ಲಿ ನಮ್ಮ ಮುಂದೆ ನಿಂತಿದ್ದಾರೆಯೇ ಹೊರತು, ಸೃಜನಶೀಲರಾಗಿ ಅಲ್ಲ ಎನಿಸುತ್ತಿದೆ.

ಆದರೆ ವಿಷಯ ಇಲ್ಲಿಗೇ ನಿಲ್ಲುವುದಿಲ್ಲ. ಮುಂದುವರಿದು ಚರ್ಚೆಗೆ ಬೇರೊಂದು ಮಗ್ಗುಲನ್ನು ತೊಡಿಸುತ್ತದೆ : ಕನ್ನಡ ನಾಡಿನಲ್ಲಿ ಇದ್ದು ಕನ್ನಡ ಭಾಷೆ ಸಾಹಿತ್ಯ ಅಭ್ಯಾಸ ಮಾಡಿದ್ದಕ್ಕಿಂತ, ಸಂಸ್ಕೃತ ಅಭ್ಯಾಸ ಮಾಡಿದ್ದೇ ಹೆಚ್ಚು ಹಾಗೆಯೇ ತೆಲುಗು ಸಂಬಂಧ ಕೂಡಾ ಪ್ರೊ|| ಸಿ.ಆರ್. ರೆಡ್ಡಿ ಅವರಿಗಾಗಿ ಬೆಳೆಸಿಕೊಂಡವರು. ಆದರೆ ಇನ್ನೊಂದು ತುದಿಗೆ – ಕನ್ನಡನಾಡಿನ ಸೃಜನಶೀಲ ಗಣಿಗಳಾದ ವೀಣೆಶೇಷಣ್ಣ, ಬಿಡಾರಂ ಕೃಷ್ಣಪ್ಪ, ಮೈಸೂರು ವಾಸುದೇವಚಾರ್ಯ – ಅವರ ಶಿಷ್ಯತ್ವ, ಸ್ನೇಹತ್ವ ಪಡೆದು ರೂಪು ತಳೆದವರು ರಾಳ್ಳಪಲ್ಲಿಯವರು. ಈ ಲೆಕ್ಕದಲ್ಲಿ ಈ ನಾಡಿನ ಕಲಾಕೃತಿಯೇ ರಾಳ್ಳಪಲ್ಲಿ ಎಂಬುದೂ ನಿಸ್ಸಂದೇಹ. ಹೀಗಾದಾಗ, ತೆಲುಗಿನಲ್ಲಿ ತೆಲುಗಿನವರನ್ನು ಉದ್ದೇಶಿಸಿ ಮಾತಾಡಿದರೂ, ಸಂಗಿತದ ಮಟ್ಟಿಗೆ ಅವರ ಲಕ್ಷ್ಯ ಕನ್ನಡ ನಾಡೆ, ಕರ್ಣಾಟಕವೆ, ಕನ್ನಡ ಕಲಾವಿದರೆ.

ಸಮಸ್ಯೆ ಬಗೆಹರಿಯಿತು ಎಂದು ಕೊಂಡಿದ್ದೇವೆ ಅಲ್ಲವೆ : ತೆಲುಗು ಸಾಹಿತ್ಯ ಕುರಿತು ಕನ್ನಡಿಗರಿಗೆ ಅನುವಾದದಲ್ಲಿಯಾದರೂ ಮಾಡಿಸಿದರು. ಕರ್ಣಾಟಕ ಸಂಗೀತ – ಕಲಾವಿದರನ್ನು ಕುರಿತು ತೆಲುಗರಿಗೆ ನೇರವಾಗಿಯೇ ತಿಳಿಸಿ ಹೇಳಿದರು. ಹೀಗಾಗಿ ರಾಳ್ಳಪಲ್ಲಿಯವರು ತೆಲುಗಿನವರಿಗೆ ಸಾಹಿತ್ಯ ವಿಮರ್ಶಕರು, ಕನ್ನಡಿಗರಿಗೆ ಸಂಗೀತ ಕಲಾತತ್ತ್ವವಿದರೂ ಆದರು.

ಈಗ ಸಮಸ್ಯೆ ಮುಂದುವರಿಯಿತು : ವಿಮರ್ಶಕರಾಗಿ ಸಂಗೀತ– ಸಾಹಿತ್ಯವನ್ನು ತೂಗಿದ್ದು ಉಂಟು. ಕಲಾವಿದರಾಗಿ ಹಾಡಿದ್ದು, ಪಿಟೀಲು ಕೊಳಲು

ನುಡಿಸಿದ್ದು, ವಾಗ್ಗೇಯಕಾರರಾಗಿ ರಾಳ್ಳಪಾಕ ಅಣ್ಣಮಾಚಾರ್ಯರ ಕೃತಿಗಳಿಗೆ ಸ್ವರ ಪ್ರಸ್ತಾರ ಕೈಗೊಂಡಿದ್ದು ಉಂಟು. ತಾತಾಚಾರ್ಯ, ಕೃಷ್ಣಮಾಚಾರ್ಯ ಅಂತಹವರಿಗೆ ಪಾಠ ಹೇಳಿದ್ದು ಉಂಟು. ಅಂದರೆ ಏಕಕಾಲದಲ್ಲಿಯೇ ರಾಳ್ಳಪಲ್ಲಿ ಯವರ ಪ್ರತಿಭಾಶಕ್ತಿ, ಕಲಾವಿದರಾಗಿ – ವಿಮರ್ಶಕರಾಗಿ ಹರಿದಿದೆ ಎಂದು ಒಪ್ಪಿ ಕೊಂಡಂತೆ ಆಯಿತು. ಸೃಜನಶೀಲ ದ್ರವ್ಯ ಹಾಗೂ ವಿಮರ್ಶನ ಪ್ರಜ್ಞೆ – ಏಕ ಕಾಲಕ್ಕೆ ಕಾಣಿಸಿಕೊಳ್ಳುತ್ತಿತ್ತು ಎಂದಾಗ, ಯಾವ ಮಾಧ್ಯಮದಲ್ಲಿ ವಿಶೇಷವಾಗಿ ರಾಳ್ಳಪಲ್ಲಿಯವರ ಪ್ರತಿಭಾವಂತಿಕೆ ಕೆಲಸ ಮಾಡಿದೆ?

ವಾಗ್ಗೇಯ ಕಾರರಾದ ತ್ಯಾಗರಾಜರಲ್ಲೂ ವಾಸುದೇವಾಚಾರ್ಯರಲ್ಲೂ ಸೂಕ್ಷ್ಮವಾದ ದೋಷವನ್ನು ಎತ್ತಿ ಆಡುವ ರಾಳ್ಳಪಲ್ಲಿಯವರು, ಭಾರತೀಯ ವಾದ್ಯಗಳಲ್ಲಿ ಶ್ರೇಷ್ಠ ಎನ್ನುವುದು ವೀಣೆಯನ್ನು, ಅದರ ನುಡಿಸುವಿಕೆಯಲ್ಲಿ ಶ್ರೇಷ್ಠ ಕಲಾವಿದರೆನ್ನುವುದು ಶೇಷಣ್ಣನವರನ್ನು, ಹಾಡುಗಾರಿಕೆಯಲ್ಲಿ ನಾದ– ಲಯ ಕಾಲ – ಲಯಗಳ ಏಕೀಭೂತವಾಗಿದ್ದ ಬಿಡಾರಂ ಕೃಷ್ಣಪ್ಪನವರನ್ನು – ಮಾತ್ರವೇ ಒಂದು ರೀತಿ ರಾಳ್ಳಪಲ್ಲಿಯವರು ಜೀವಮಾನ ಪರ್ಯಂತ ಶ್ರೇಷ್ಠ ಮಾದರಿಯಾಗಿ ಇಟ್ಟುಕೊಂಡದ್ದು ಇವರಿಬ್ಬರನ್ನೇ. ಅಂತೆಯೇ ಜಾನಪದ ಸಂಗೀತ ಹಿಂದೂಸ್ತಾನಿ ಸಂಗೀತ ಕೊನೆಗೆ ಪಾಶ್ಚಾತ್ಯ ಸಂಗೀತ ಕುರಿತೂ ಬೇಕೋ ಬೇಡವೊ ಎನ್ನುವಂತೆ ಮಾತಾಡಿದರು, ಶೇಷಣ್ಣ – ಕೃಷ್ಣಪ್ಪ ಮಾದರಿಗಳು ಅಲ್ಲಿ ಅವರಿಗೆ ಕಾಣಸಿಕ್ಕಲೇ ಇಲ್ಲ. ಆ ಏರಿಕೆಗೆ ಬಾರದೇ ಇರಲು, ಆಯಾ ಸಂಗೀತಗಳಲ್ಲಿಯೇ ಇರುವ ಭೇದ – ದೋಷ, ಅಂತೆಯೇ ಇತ್ತೀಚೆಗೆ ಯಾವುದೇ ಸಂಗೀತದಲ್ಲಿಯೂ ಕಾಣಬರುವ ಅಶ್ರದ್ಧೆ ಆರ್ಭಟಗಳ ಬಗ್ಗೆ ರಾಳ್ಳಪಲ್ಲಿಯವರು ತುಂಬಾ ಕಟು ವಾಗಿ ಟೀಕಿಸುತ್ತಾರೆ. ಇದು "ಗಾನಕಲೆಯು" ಮೊದಲ ಲೇಖನದಲ್ಲಿಯೇ ಅಂದರೆ ೧೯೨೭ ರಿಂದಲೇ ಪ್ರಾರಂಭಗೊಂಡಿದೆ.

ಇದು ತಪ್ಪು ಸರಿ ಅನ್ನುವ ಧ್ವನಿಯಲ್ಲಿ ನಾನು ಪ್ರಸ್ತಾಪಿಸುತ್ತಿಲ್ಲ. ಒಂದು ಕಲೆಯ ಯುಗಮಾನ ಪ್ರತಿಧ್ವನಿಸುವ ಕಲಾವಿದರು ಇಲ್ಲವೇ ಇಲ್ಲ ಎನ್ನುವಂತಿಲ್ಲ. ಶ್ರೇಷ್ಠತೆ, ಶ್ರೇಷ್ಠರ ಮಾದರಿಯಿಂದಲೇ ಕಲೆಯನ್ನು ಗುರುತಿಸಿ ಕೊಳ್ಳುವ ನೆಲೆಯನ್ನೂ ತಿರಸ್ಕರಿಸುವ ಸಂಗತಿ ಏನಲ್ಲ. "ಶೇಷಣ್ಣ ಕೃಷ್ಣಪ್ಪ ನವರ" ಕುರಿತ ಲೇಖನ, ಅದಕ್ಕಿಂತಲೂ ಪುಸ್ತಕ ರೂಪದಲ್ಲಿ ಅಳವಡದ ಮೈಸೂರು ವಾಸುದೇವಾಚಾರ್ಯರನ್ನು ಕುರಿತ ಲೇಖನ – ಸಂಗೀತಗಾರರನ್ನು ಕುರಿತ ವಿಮರ್ಶೆಗೆ ಇವತ್ತಿಗೂ ಒಂದು ಮಾದರಿ ಎಂಬುವನ್ನು ಒಪ್ಪಿಕೊಳ್ಳಲೇ ಬೇಕು.

ಈ ದೃಷ್ಟಿಯಲ್ಲೇ ಕನ್ನಡ ನಾಡಿನಲ್ಲಿ ಸಂಗೀತ ವಿಮರ್ಶೆಯು ಒಂದು ಮಾದರಿ ಶುರುವಾದದ್ದೇ ರಾಳ್ಳಪಲ್ಲಿಯವರಿಂದ ಎಂದು ತಿಳಿಯುತ್ತೇನೆ. ಅಲ್ಲಿಯ ವರೆಗೂ ಲಕ್ಷಣ ಗ್ರಂಥಗಳು ಇದ್ದವೇ ಹೊರತು, ಸಮಕಾಲೀನ ಲಕ್ಷ್ಯ-ಲಕ್ಷಣ ಗಳನ್ನು ಕುರಿತು ಸ್ವತಂತ್ರವಾಗಿ ವಿಚಾರ ಮಾಡಿದ ಬರಹಗಳು ಇಲ್ಲವೇ ಇಲ್ಲ. ಅಂತೆಯೇ, ಸಂಗೀತ ಕುರಿತು ಸಾಹಿತ್ಯದ ದೃಷ್ಟಿ ಬಗ್ಗೆ, ವಿಮರ್ಶೆಯಲ್ಲಿ ಸಾಹಿತ್ಯದ ಯಾಜಮಾನ್ಯದ ಬಗ್ಗೆ – ನನಗೆ ತಿಳಿದಂತೆ ಮೊದಲು ಆಕ್ಷೇಪ ಎತ್ತಿ ದವರೂ ರಾಳ್ಳಪಲ್ಲಿಯವರೆ. ಈ ದಿನಗಳಲ್ಲಿ ಚಿತ್ರಕಲೆ, ಸಿನಿಮಾ ಮೊದಲಾದ ಮಾಧ್ಯಮಗಳವರು ಆಡುವ ಈ ಬಗೆಯ ಮಾತನ್ನು ಶತಮಾನದ ಪೂರ್ವ ದಲ್ಲಿಯೇ ರಾಳ್ಳಪಲ್ಲಿಯವರು ಮನಗಾಣಿಸಿದ್ದರು ಎಂಬುದನ್ನು ನೆನೆದರೆ ಅವರು ಎಂತಹ ದಾರ್ಶನಿಕ ಎಂಬುದು ದೃಢೀಕೃತಗೊಳ್ಳುತ್ತದೆ. ಹೀಗಿರುವಾಗ ಸಂಗೀತ ಮಾಧ್ಯಮ ಕುರಿತ ದೃಷ್ಟಿ, ಭಾಷೆ, ಶೈಲಿಗಳಿಗೆ 'ಗಾನಕಲೆ' ಯಲ್ಲಿನ ಬಹಳಷ್ಟು ಲೇಖನಗಳನ್ನು ಮಾದರಿಗಾಗಿ ಹೇಳಬಹುದು. "ತ್ಯಾಗಯ್ಯನವರ ನಾದಸುಧಾರಸ" "ಸಂಗೀತದಲ್ಲಿ ಅಕ್ಷರ ರಮ್ಯತೆ", "ಸಂಗೀತದ ಸೌಂದರ್ಯಾನುಭವದಲ್ಲಿ ಜ್ಞಾನಾಂಶ" "ವಾಗ್ಗೇಯಕಾರ ಅನ್ನಮಾಚಾರ್ಯ", "ಕ್ಷೇತ್ರಯ್ಯನ ಪದಕವಿತೆ."

ರಕ್ತಿ, ವಾಸನಾ ಪರಿಪಕ್ವತೆ, ನಾದ-ಕಾಲ ಲಯಗಳ ಏಕೀಭಾವ, ೭ ಸ್ವರಗಳನ್ನು ಆಧರಿಸಿಯೇ ೧೨ ಮಾತ್ರವಲ್ಲ ೨೨ ಶ್ರುತಿಗಳನ್ನು ಗಮಗರೀತಿ ತೋರುವಿಕೆ, ಸಂಗೀತ – ಸಾಹಿತ್ಯಗಳ ಧಾತು – ಮಾತು ಗ್ರಹಿಸಿ ಭಕ್ತಿ-ಭಾವ ತಂದು ಕೊಡುವಿಕೆ, ಕಲೆಯನ್ನು ಆರಾಧಿಸುವಿಕೆಯ ರಸಿಕ ಸಹೃದಯ ಪಂಥ ನಿರ್ಮಾಪಕರಾಗಿದ್ದರು ರಾಳ್ಳಪಲ್ಲಿಯವರು. ಇಲ್ಲಿಯೇ ಇನ್ನೊಂದು ಅಂಶದ ಕಡೆಗೂ ಗಮನ ಕೊಡಬೇಕು : ನಮ್ಮ ಈ ಕಾಲದ ಅನ್ಯಜ್ಞಾನ ಶಿಸ್ತಿನ ಬೇಡಿ ಕೆಯ ಮೊಳಕೆ ರಾಳ್ಳಪಲ್ಲಿಯವರಲ್ಲೇ ಕಾಣಬಹುದು. ಸಂಗೀತ-ಸಾಹಿತ್ಯಗಳನ್ನು ಪರಸ್ಪರ ಮಾಧ್ಯಮದವರು ಹೇಗೆ, ಏಕೆ, ಎಷ್ಟು ತಿಳಿದಿರಬೇಕು, ಅದರಿಂದ ಆಗುವ ಹಿರಿಮೆ ಎಂಥಾದ್ದು ಎಂಬುಧನ್ನು ಹೆಜ್ಜೆ ಹೆಜ್ಜೆಗೂ ಅವರ ಬರಹಗಳಲ್ಲಿ ಕಂಡು ಬರುತ್ತದೆ.

ಇಂತಹ ರಸಿಕ ನೆಲೆಯಲ್ಲೇ ಸಾಹಿತ್ಯವನ್ನು, ಸಾಹಿತ್ಯದ ಭಾಗವಾಗಿಸಿ ಕೊಂಡ ನಾಟಕ ಕಲೆಯನ್ನು ಕಾಣಲು ಪ್ರಯತ್ನಿಸುವ ರಾಳ್ಳಪಲ್ಲಿಯವರು, "ಜೀವನಕಲೆ" ಎಂದೇ ಆ ಮಾದರಿಗೆ ಹೆಸರು ಕೊಡುತ್ತಾರೆ. ಇಲ್ಲಿಯೂ ಪರ ಕಾಲಮತದ ಸ್ವಾಮಿಯವರನ್ನು ಶ್ರೇಷ್ಠತೆಯ ಮಾದರಿಯಾಗಿ ಪ್ರತಿಭಾವಿಸಿ, ತಮ್ಮ ಗ್ರಹಿಕೆಯ ನೆಲೆಯಲ್ಲಿ ಸಾಹಿತ್ಯವನ್ನು ವಿವರಿಸುತ್ತಾರೆ. ಇನ್ನೂ ಹಿಂದಕ್ಕೆ

ಹೊರಳಿ, ಶ್ರೀಕೃಷ್ಣದೇವರಾಯ ಅವನ ಕಾಲವನ್ನೇ ಜೀವನಕಲೆಗೆ ಮಾದರಿಯಾಗಿ ಸ್ವೀಕರಿಸುತ್ತಾರೆ. ಗಾಂಧೀಜಿಯನ್ನು ಕುರಿತು ಕೇವಲ ಎರಡು ಕಡೆ ಪ್ರಾಸಂಗಿಕವಾಗಿ ಎಳೆದು ತಂದರೂ, ಸಮಕಾಲೀನ ಸಾಹಿತ್ಯ-ಜೀವನಗಳ ಬಗ್ಗೆ ಉತ್ಸಾಹವಿಲ್ಲ. ಕೊನೆಗೆ ಯಾರು ಏನೆಂದು ನಿರ್ಧರಿಸಿದರೂ, ನಾಟಕಕಲೆ ಪುರುಷರಿಗೆ ಮಾತ್ರವೇ, ಜೀವನವೂ ರಸಿಕತೆಯೂ ಪುರುಷರಿಗೇ – ಎಂಬ ನಿರ್ಣಯಗಳನ್ನು "ತರ್ಕಶಾಸ್ತ್ರ" ಪಂಡಿತರಂತೆಯೇ ಮಂಡಿಸುವುದನ್ನು ನಾವು ನೋಡಬಹುದು.

ಈ ಹಿನ್ನೆಲೆಯಲ್ಲಿ ರಾಳ್ಲಪಲ್ಲಿಯವರು ಯಾವ ಕಾಲ ಧರ್ಮದಲ್ಲಿ ಬದುಕುತ್ತಿದ್ದರು ಎಂದು ಕೇಳಿಕೊಳ್ಳುವುದು ತಪ್ಪೆನ್ನಿಸಲಾರದು. ಚರಿತ್ರೆ ಹಾಗೂ ಸಮಕಾಲೀನ ಸಮಾಜದ ಅರಿವಿಗೆ 'ರಸಿಕತೆ' "ವಾಸನಾಪರಿಪಕ್ವತೆ" ಶ್ರೇಷ್ಠತೆಗಳು ಇಷ್ಟು ವಿಮುಖವಾಗುವುದು ಸಾಧ್ಯವೇ ಸಹಜವೇ ಎಂಬ ಅನುಮಾನ ಉಂಟಾಗುತ್ತದೆ. ಉಕ್ತಿಯ ನಿಷ್ಠುರ, ನಿಷ್ಕೃಷ್ಟತೆಗೆ ಹೆಸರಾದ ರಾಳ್ಲಪಲ್ಲಿಯವರು, ಸ್ತ್ರೀಯರನ್ನು ನಾಟಕರಂಗದಿಂದ ದೂರ ಇಡುವ ಬಗ್ಗೆ ಬರೆದ, ಅಭಿಪ್ರಾಯ, ಭೇದ ಏನೇ ಇರಲಿ, ಮಾತುಗಳ ಕೀಳು ಅಭಿರುಚಿ ಬಗ್ಗೆ ನನ್ನಲ್ಲಿ ಇನ್ನೂ ನೋವು ಉಳಿದಿದೆ. ಸಂಗೀತ-ಸಾಹಿತ್ಯ-ನಾಟಕಗಳು ಕೇವಲ ರಕ್ತಿಗಾಗಿ, ಆ ಮೂಲಕ ಭಕ್ತಿಗಾಗಿ ಎಂದು ತಿಳಿಯುವ ಬಗ್ಗೆಯೇ ಇನ್ನೂ ನನಗೆ ಸಂಶಯವಿದೆ. ಅವುಗಳ ಮೇಲೆ ಚರಿತ್ರೆ – ಸಾಮಾಜಿಕ ಜೀವನಗಳ ಏರಿಳಿತ ಕೆಲಸ ಮಾಡದೇ ಇರುವುದು ಸಂಭವನೀಯವೇ? ಹಾಗಾಗಿದ್ದರೆ ಸಂಗೀತ, ಜಾನಪದ ಸಂಗೀತ, ಹಿಂದೂಸ್ತಾನಿ ಸಂಗೀತಗಳೆಂಬ ಪ್ರಭೇದಗಳು ಕಾಣಿಸಿಕೊಳ್ಳದೇ ಇರಲು ಶಕ್ಯವಿತ್ತೇ? ಅದನ್ನು ಒಪ್ಪಿಕೊಳ್ಳುವ ರಸಿಕತ್ವ, ಪಿಟೀಲನ್ನು ವೀಣೆಯೊಂದಿಗೆ ಸ್ವೀಕರಿಸಿದ ರಸಿಕತ್ವ, ಪಾಶ್ಚಾತ್ಯ ಸಂಗೀತದ ಸಾಧ್ಯತೆ-ವ್ಯಾಪ್ತಿ-ಪ್ರಭಾವಕ್ಕೆ ವಿಮುಖವಾಗುವುದು ಸಾಧುವೆ? ಇದು ರಾಳ್ಲಪಲ್ಲಿಯವರನ್ನಲ್ಲ. ರಾಳ್ಲಪಲ್ಲಿಯ ನೆಲೆಯಲ್ಲಿ ಇದ್ದು, ಇನ್ನೂ ನಮ್ಮೊಡನೆ ಇರುವವರ ಜೊತೆ ನಾನು ಕೇಳಬಯಸುತ್ತಿರುವೆ.

ಶತಮಾನದ ಪೂರ್ವದಲ್ಲಿ ರೂಪುಗೊಂಡ ಮಾದರಿಯನ್ನು ಆ ಕಾಲದಲ್ಲಿಯೇ ಇಟ್ಟು ನೋಡದೆ ಗತ್ಯಂತರವಿಲ್ಲ ಎಂಬುದು ನನ್ನ ಈವರೆಗಿನ ಮಾತಿನ ಅಭಿಪ್ರಾಯವಾಗಿದೆ. ಅಲ್ಲಿಯೂ ಸಮಕಾಲೀನ ಸಂವೇದನೆಗಳ ಜೊತೆ ತುಲನೆ ಮಾಡಿ, ಆಯಾ ಮಾದರಿಗಳ ವ್ಯಕ್ತಿ ಇಷ್ಟತೆ-ಸಾಮಾಜಿಕ ನಿಷ್ಠತೆಗಳ ಬಗ್ಗೆ ಒಂದು ನಿಲುವಿಗೆ ಬರುವುದು ಸಾಧ್ಯವೆ.

ಕಲೆ ಮತ್ತು ಜೀವನ ಕುರಿತು ವಿಚಾರ ಮಾಡಿದ ವ್ಯಕ್ತಿಯ ಈ ಶತಮಾನೋತ್ಸವ ಸಂದರ್ಭದಲ್ಲಿಯಾದರೂ ಅವುಗಳ ಬಗ್ಗೆ ನೇರವಾಗಿ ಆಲೋಚಿಸುವ ಧೀಶಕ್ತಿಯನ್ನು ನಾವು ಪಡೆದುಕೊಳ್ಳಬೇಕಾಗಿದೆ. ಇದಕ್ಕಾಗಿ ಡಾ||ರಾಳ್ಲಪಲ್ಲಿ ಅನಂತಕೃಷ್ಣಶರ್ಮ ಅಂತಹವರ ನೆನಪು ಸದಾ ಉತ್ತೇಜನ ನೀಡುವಂಥಾಗಲಿ

# ಸತ್ಯದ ಸಮೀಪ ಬಾ

—ಶ್ರೀಮತಿ ಕೆ. ಶರೀಫಾ

೧

ಗರ್ವೆನುವ ಗೂಢದಲಿ,
ಕತ್ತಲೆಯ ಮುಸುಕಿನಲಿ
ಭಾರವಾದ ಎಣ್ಣೆಗಟ್ಟಿದ
ಮಸುಕಾದ ಮೂಗುತಿ,
ತಲೆ ತುಂಬ
ಮುಸುಕು ಹೊದ್ದು,
ಮೊಳಕಾಲುಗಳ ಮಧ್ಯ
ತಲೆ ತೂರಿಸಿ,
ಮುಳುಮುಳು ಅತ್ತು
ತಲೆ ತಗ್ಗಿಸಿ ಕೂಡದೇ,

೨

ವಿಷ ಜಂತುಗಳ
ಎದೆಗೆ ಒದ್ದು ತಲೆಯೆತ್ತಿ ನಡೆದರೆ
ಕುಕ್ಕಿ ಕುಕ್ಕಿ ನೋಯಿಸುವ
ರಣ ಹದ್ದುಗಳ ಬೇಧಿಸಿ
ಮೌಢ್ಯತೆಯ
ಪೊರೆ ಹರಿದು
ನೋವಿನಲ್ಲೂ ನಗುವ
ಮುಖವಾಡಗಳ ಬದಿಗಿಟ್ಟು,
ನಿಜವಾದ ಬದುಕು
ಬದುಕುವುದಕ್ಕೆ
ಸತ್ಯದ ಸಮೀಪ ಬಾ.

ಹೊರಳಿ, ಶ್ರೀಕೃಷ್ಣದೇವರಾಯ ಅವನ ಕಾಲವನ್ನೇ ಜೀವನಕಲೆಗೆ ಮಾದರಿಯಾಗಿ ಸ್ವೀಕರಿಸುತ್ತಾರೆ. ಗಾಂಧೀಜಿಯನ್ನು ಕುರಿತು ಕೇವಲ ಎರಡು ಕಡೆ ಪ್ರಾಸಂಗಿಕವಾಗಿ ಎಳೆದು ತಂದರೂ, ಸಮಕಾಲೀನ ಸಾಹಿತ್ಯ-ಜೀವನಗಳ ಬಗ್ಗೆ ಉತ್ಸಾಹವಿಲ್ಲ. ಕೊನೆಗೆ ಯಾರು ಏನೆಂದು ನಿರ್ಧರಿಸಿದರೂ, ನಾಟಕಕಲೆ ಪುರುಷರಿಗೆ ಮಾತ್ರವೇ, ಜೀವನವೂ ರಸಿಕತೆಯೂ ಪುರುಷರಿಗೇ – ಎಂಬ ನಿರ್ಣಯಗಳನ್ನು "ತರ್ಕಶಾಸ್ತ್ರ" ಪಂಡಿತರಂತೆಯೇ ಮಂಡಿಸುವುದನ್ನು ನಾವು ನೋಡಬಹುದು.

ಈ ಹಿನ್ನೆಲೆಯಲ್ಲಿ ರಾಳ್ಳಪಲ್ಲಿಯವರು ಯಾವ ಕಾಲ ಧರ್ಮದಲ್ಲಿ ಬದುಕುತ್ತಿದ್ದರು ಎಂದು ಕೇಳಿಕೊಳ್ಳುವುದು ತಪ್ಪೆನ್ನಿಸಲಾರದು. ಚರಿತ್ರೆ ಹಾಗೂ ಸಮಕಾಲೀನ ಸಮಾಜದ ಅರಿವಿಗೆ 'ರಸಿಕತೆ' "ವಾಸನಾಪರಿಪಕ್ವತೆ" ಶ್ರೇಷ್ಠತೆಗಳು ಇಷ್ಟು ವಿಮುಖವಾಗುವುದು ಸಾಧ್ಯವೇ ಸಹಜವೇ ಎಂಬ ಅನುಮಾನ ಉಂಟಾಗುತ್ತದೆ. ಉಕ್ತಿಯ ನಿಷ್ಠುರ, ನಿಷ್ಕೃಷ್ಟತೆಗೆ ಹೆಸರಾದ ರಾಳ್ಳಪಲ್ಲಿಯವರು, ಸ್ತ್ರೀಯರನ್ನು ನಾಟಕರಂಗದಿಂದ ದೂರ ಇಡುವ ಬಗ್ಗೆ ಬರೆದ, ಅಭಿಪ್ರಾಯ, ಭೇದ ಏನೇ ಇರಲಿ, ಮಾತುಗಳ ಕೀಳು ಅಭಿರುಚಿ ಬಗ್ಗೆ ನನ್ನಲ್ಲಿ ಇನ್ನೂ ನೋವು ಉಳಿದಿದೆ. ಸಂಗೀತ-ಸಾಹಿತ್ಯ-ನಾಟಕಗಳು ಕೇವಲ ರಕ್ತಿಗಾಗಿ, ಆ ಮೂಲಕ ಭಕ್ತಿಗಾಗಿ ಎಂದು ತಿಳಿಯುವ ಬಗ್ಗೆಯೇ ಇನ್ನೂ ನನಗೆ ಸಂಶಯವಿದೆ. ಅವುಗಳ ಮೇಲೆ ಚರಿತ್ರೆ – ಸಾಮಾಜಿಕ ಜೀವನಗಳ ಏರಿಳಿತ ಕೆಲಸ ಮಾಡದೇ ಇರುವುದು ಸಂಭವನೀಯವೇ? ಹಾಗಾಗಿದ್ದರೆ ಸಂಗೀತ, ಜಾನಪದ ಸಂಗೀತ, ಹಿಂದೂಸ್ತಾನಿ ಸಂಗೀತಗಳೆಂಬ ಪ್ರಭೇದಗಳು ಕಾಣಿಸಿಕೊಳ್ಳದೇ ಇರಲು ಶಕ್ಯವಿತ್ತೇ? ಅದನ್ನು ಒಪ್ಪಿಕೊಳ್ಳುವ ರಸಿಕತ್ವ, ಪಿಟೀಲನ್ನು ವೀಣೆಯೊಂದಿಗೆ ಸ್ವೀಕರಿಸಿದ ರಸಿಕತ್ವ, ಪಾಶ್ಚಾತ್ಯ ಸಂಗೀತದ ಸಾಧ್ಯತೆ–ವ್ಯಾಪ್ತಿ–ಪ್ರಭಾವಕ್ಕೆ ವಿಮುಖವಾಗುವುದು ಸಾಧುವೆ? ಇದು ರಾಳ್ಳಪಲ್ಲಿಯವರನ್ನಲ್ಲ. ರಾಳ್ಳಪಲ್ಲಿಯ ನೆಲೆಯಲ್ಲಿ ಇದ್ದು, ಇನ್ನೂ ನಮ್ಮೊಡನೆ ಇರುವವರ ಜೊತೆ ನಾನು ಕೇಳಬಯಸುತ್ತಿರುವೆ.

ಶತಮಾನದ ಪೂರ್ವದಲ್ಲಿ ರೂಪುಗೊಂಡ ಮಾದರಿಯನ್ನು ಆ ಕಾಲದಲ್ಲಿಯೇ ಇಟ್ಟು ನೋಡದೆ ಗತ್ಯಂತರವಿಲ್ಲ ಎಂಬುದು ನನ್ನ ಈವರೆಗಿನ ಮಾತಿನ ಅಭಿಪ್ರಾಯವಾಗಿದೆ. ಅಲ್ಲಿಯೂ ಸಮಕಾಲೀನ ಸಂವೇದನೆಗಳ ಜೊತೆ ತುಲನೆ ಮಾಡಿ, ಆಯಾ ಮಾದರಿಗಳ ವ್ಯಕ್ತಿ ಇಷ್ಟತೆ–ಸಾಮಾಜಿಕ ನಿಷ್ಠತೆಗಳ ಬಗ್ಗೆ ಒಂದು ನಿಲುವಿಗೆ ಬರುವುದು ಸಾಧ್ಯವೆ.

ಕಲೆ ಮತ್ತು ಜೀವನ ಕುರಿತು ವಿಚಾರ ಮಾಡಿದ ವ್ಯಕ್ತಿಯ ಈ ಶತಮಾನೋತ್ಸವ ಸಂದರ್ಭದಲ್ಲಿಯಾದರೂ ಅವುಗಳ ಬಗ್ಗೆ ನೇರವಾಗಿ ಆಲೋಚಿಸುವ ಧೀಶಕ್ತಿಯನ್ನು ನಾವು ಪಡೆದುಕೊಳ್ಳಬೇಕಾಗಿದೆ. ಇದಕ್ಕಾಗಿ ಡಾ||ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಅಂತಹವರ ನೆನಪು ಸದಾ ಉತ್ತೇಜನ ನೀಡುವಂಥಾಗಲಿ

# ಸತ್ಯದ ಸಮೀಪ ಬಾ

—ಶ್ರೀಮತಿ ಕೆ. ಶರೀಫಾ

೧

ಗರ್ವಿಸುವ ಗೂಢದಲಿ,
ಕತ್ತಲೆಯ ಮುಸುಕಿನಲಿ
ಭಾರವಾದ ಏಣ್ಣೆಗಟ್ಟಿದ
ಮಸುಕಾದ ಮೂಗುತಿ,
ತಲೆ ತುಂಬ
ಮುಸುಕು ಹೊದ್ದು,
ಮೊಳಕಾಲುಗಳ ಮಧ್ಯ
ತಲೆ ತೂರಿಸಿ,
ಮುಳುಮುಳು ಅತ್ತು
ತಲೆ ತಗ್ಗಿಸಿ ಕೂಡದೇ,

೨

ವಿಷ ಜಂತುಗಳ
ಎದೆಗೆ ಒದ್ದು ತಲೆಯೆತ್ತಿ ನಡೆದರೆ
ಕುಕ್ಕಿ ಕುಕ್ಕಿ ನೋಯಿಸುವ
ರಣ ಹದ್ದುಗಳ ಬೇಧಿಸಿ
ಮೌಢ್ಯತೆಯ
ಪೊರೆ ಹರಿದು
ನೋವಿನಲ್ಲೂ ನಗುವ
ಮುಖವಾಡಗಳ ಬದಿಗಿಟ್ಟು,
ನಿಜವಾದ ಬದುಕು
ಬದುಕುವುದಕ್ಕೆ
ಸತ್ಯದ ಸಮೀಪ ಬಾ.

# ಉ.ಕ. ಜಿಲ್ಲೆಯ ತೊಂಬತ್ತರ ದಶಕದ ಕನ್ನಡ ಕಾವ್ಯ : ಒಂದು ಸಮೀಕ್ಷೆ

—ಆರ್.ಪಿ. ಹೆಗಡೆ

ಗತಿಶೀಲವಾದ ಬದುಕಿನಲ್ಲಿ ಹೊರಳು ನೋಟ ಅಪೇಕ್ಷಣೀಯವೇ. ಬದಲಾವಣೆಯ ಕಾರ್ಯ-ಕಾರಣ-ಪರಿಣಾಮಗಳನ್ನು ಗುರುತಿಸುತ್ತ, ಒಪ್ಪಿ ಸ್ವೀಕರಿಸುತ್ತ, ಅದರ ಮುಂಬೆಳಕಿನಲ್ಲಿ ಉತ್ತರದ ಸುಳಿವು ಸೂಚನೆಯನ್ನು ಗಮನಿಸುವ ಕೆಲಸ ಸಾಹಿತ್ಯದಲ್ಲಿಯೂ ನಡೆಯಬೇಕಾದುದೇ. ಪರಂಪರೆಯ ಹರಿವಿನಲ್ಲಿ ಒಂದಾದ ಸಾಹಿತ್ಯವನ್ನು ಒಂದು ದಶಕದ ಮಜಲಿಗೆ ಕತ್ತರಿಸಿ ನೋಡುವುದು ಸಾಧ್ಯವೇ? ಸಾಧುವೇ? - ಎಂಬುದು ಒಂದು ಪ್ರಶ್ನೆ. ಹಾಗೆ ಮಾಡುವುದರ ಪ್ರಯೋಜನ ಏನು ಎಂಬುದು ಮತ್ತೊಂದು ಪ್ರಶ್ನೆ. ಆದರೆ ಈ ಬಗೆಯ ಪ್ರಶ್ನೆ-ಉತ್ತರ, ತರ್ಕ-ಸಮರ್ಥನೆಗಳು ಏನೇ ಇರಲಿ, ಒಂದು ನಿಶ್ಚಿತ ಕಾಲಘಟ್ಟದಲ್ಲಿ ನಿಂತು ನೋಡುವ ಈ ಕ್ರಿಯೆ ಒಂದು ಕುತೂಹಲಕಾರಿ ಅಧ್ಯಯನವಾದೀತು. ಮಾತ್ರವಲ್ಲ ಇದೊಂದು ಕಷ್ಟದ, ಜವಾಬ್ದಾರಿಯುತವಾದ ಕೆಲಸವೂ ಹೌದು.

ಅಕ್ಷರಸ್ಥರ ಸಂಖ್ಯೆ ಹೆಚ್ಚುತ್ತಿರುವುದು, ಪ್ರಸಾರ ಮಾಧ್ಯಮಗಳಲ್ಲಿ ಅವಕಾಶ ವಿಸ್ತರಿಸುತ್ತಿರುವುದು ಸಹಜವಾಗಿಯೇ ಬರಹಗಾರರ ಸಂಖ್ಯೆಯ ವೃದ್ಧಿಗೂ ಕಾರಣವಾಗಿವೆ. ಉಳಿದೆಲ್ಲ ಸೃಜನಶೀಲ ಬರಹಗಾರರಿಗಿಂತ ಕವಿಗಳ ಸಂಖ್ಯೆ ಅಧಿಕವೆಂಬುದು, ಹಾಗೂ ಈ ಪೈಕಿ ಕಾವ್ಯಕೃಷಿಯನ್ನು ಗಂಭೀರ ಕ್ರಿಯೆಯಾಗಿ ಸ್ವೀಕರಿಸಿದವರ ಸಂಖ್ಯೆ ಕಡಿಮೆಯೆಂಬುದು ಒಂದು ಸಹಜ-ಸರಳ ಸತ್ಯ. ಹೇಳಿ ಕೇಳಿ ಇದು 'ಮೇಡ್ ಈಸಿ' ಯುಗ. ತತ್‌ಕ್ಷಣ ಸಿದ್ಧಿಗಾಗಿ ಬಯಸುವ ಈ ದಿನಗಳಲ್ಲಿ ಕಾವ್ಯವೂ ಈ ಬಯಕೆಯಿಂದ ತಪ್ಪಿಸಿಕೊಳ್ಳುವುದು ಹೇಗೆ? ಹೀಗಿದ್ದರೂ, ಇಂದಿನ ಅಕಾವ್ಯ-ಗಕಾವ್ಯಗಳ ಹುಲುಸುಬೆಳೆಯ ನಡುವೆಯೇ ನಿಷ್ಠುರ ಕಸೋಟಿಯಲ್ಲಿ ಲೆಕ್ಕಿಸಿಕೊಂಡು ಗಟ್ಟಿಯಾಗಿ ನಿಲ್ಲಬಲ್ಲ ಕಾಳುಗಳೂ ಇವೆಯೆಂಬುದು ಸಮಾಧಾನದ ಸಂಗತಿ.

ಕಾವ್ಯವು ಒಂದು ಸಂಕೀರ್ಣ ಸೃಷ್ಟಿ. ಅನುಭವದ ಹೊಸತನ, ಆ ಮೂಲಕ ರೂಪು ಪಡೆಯುವ ತಾತ್ವಿಕತೆ. ಮತ್ತು ಅದಕ್ಕೆ ಅನನ್ಯವೆನಿಸುವ ರೀತಿಯಲ್ಲಿ ಆಕಾರ ಕೊಡುವ ಅಭಿವ್ಯಕ್ತಿಯ ವೈಯುಕ್ತಿಕ ತುರ್ತುಗಳಿಂದಾಗಿ ಕಾವ್ಯದ ಸ್ವರೂಪ ಹಾಗೂ ಹೆಣಿಕೆಗಳಲ್ಲಿ ಸೂತ್ರೀಕರಿಸಲಾಗದ ವೈಲಕ್ಷಣ್ಯಗಳು ಉಂಟಾಗುತ್ತವೆ. ಪರಂಪರೆಯ ಅಧ್ಯಯನ, ಅನುಭವ, ಹೃದಯ ಸಂಸ್ಕಾರಗಳಿದ್ದರೂ ಯಾವುದು ಕಾವ್ಯ ಎಂಬ ಪ್ರಶ್ನೆಗೆ ಉತ್ತರ ನೀಡುವುದು ಸುಲಭವಲ್ಲ. ಕಾವ್ಯದ ನಿಲವು ಒಲವುಗಳಲ್ಲಿ ಸಂಭವಿಸುವ ಹೊಸ ಬೆಳವಣಿಗೆಗಳಿಂದಾಗಿ ಅವುಗಳೊಟ್ಟಿಗೆ ಬೆಳೆಯದೆ ಮುಕ್ತ ತೀರ್ಪು ನೀಡುವುದೂ ಸಾಧ್ಯವಿಲ್ಲ. ಕಾವ್ಯದ ಸಾಮಾಜಿಕ ಜವಾಬ್ದಾರಿಯನ್ನು ಒಪ್ಪಿಕೊಳ್ಳುತ್ತಲೂ ಕಾವ್ಯಗುಣದ ಗೈರುಹಾಜರನ್ನು ಮನ್ನಿಸುವುದೂ ಸಾಧ್ಯವಿಲ್ಲ. ಈ ಬಗೆಯ ಸ್ವೀಕೃತಿ – ನಿರಾಕರಣೆಗಳ ನಡುವೆಯೇ ಒಬ್ಬ ವಿಮರ್ಶಕನು ಮುಖಾಮುಖಿಯಾಗಿ ನಿಲ್ಲುವ ಸವಾಲುಗಳನ್ನು ಗೆಲ್ಲಲು ಹೆಣಗಬೇಕಾಗುತ್ತದೆ. ಕಾವ್ಯದ ಮಿತಿ ಮತ್ತು ಸಾಧ್ಯತೆಗಳ ನಡುವಣ ನಿಜವನ್ನು ಶೋಧಿಸಬೇಕಾಗುತ್ತದೆ. ಮತ್ತು ಇಂಥ ಶೋಧವು ವಿಮರ್ಶಕನೊಬ್ಬನ ಮಿತಿ ಮತ್ತು ಸಾಧ್ಯತೆಗಳ ಶೋಧ ಕೂಡ ಆಗಿಬಿಡುವುದೆಂಬ ಅನುಮಾನ ನನಗಿದೆ.

೨

ಜಿಲ್ಲೆಯ ಈ ದಶಕದ ಕಾವ್ಯಸೃಷ್ಟಿಯಲ್ಲಿ ಕಳೆದ ದಶಕಗಳಲ್ಲಿ ಬರೆಯುತ್ತಿದ್ದ ಅನೇಕರು ಸೇರಿದ್ದಾರೆ. ಅವರಲ್ಲಿ ಕೆಲವರು ಆಗಲೇ ಗುರುತಿಗೆ ಸಿಕ್ಕು ನೆಲೆಗೊಂಡವರು. ಸಿದ್ಧ ಶೈಲಿಯ ಪ್ರಸಿದ್ಧರು. ಈ ದಶಕದಿಂದ ಬರೆಯತೊಡಗಿದ ಕೆಲವರು ಬೇರೆಯಾಗಿ ನಿಲ್ಲಬಲ್ಲವರು. ಸಂಕಲನವನ್ನು ಪ್ರಕಟಿಸಿರದಿದ್ದರೂ ಬಿಡಿ ಕವನಗಳ ಮೂಲಕ ಪ್ರತ್ಯೇಕ ಅಸ್ತಿತ್ವದ ಮುದ್ರೆಯೊತ್ತಿರುವ ಯುವ ಕವಿಗಳ ಪರಿಚಯ ಈ ದಶಕದಲ್ಲಾಗಿದೆ. ಇವರೆಲ್ಲರನ್ನು ಅವರ ಕೃತಿಗಳ ದ್ವಾರಾ ಪರಿಚಯಿಸುತ್ತಾ, ಒಟ್ಟಾರೆಯಾಗಿ ಈ ಅವಧಿಯ ನಿರ್ಮಿತಿಗಳನ್ನು ಗಮನಿಸಬೇಕಾಗಿದೆ.

* ಡಾ|| ಸಯ್ಯದ್ ಝಮೀರುಲ್ಲಾ ಷರೀಫ್ ಜಿಲ್ಲೆಯ ಸಾಹಿತ್ಯವಲಯದಲ್ಲಿ ಆಗಲೇ ಪರಿಚಿತರು. ಅವರ 'ಭರವಸೆಗಳು' ಹಾಗೂ 'ಮಾತನಾಡಿದ ಮೌನ'ದ ಸಂಕಲನಗಳಲ್ಲಿ ಲವಲವಿಕೆಯಿದೆ. ಹದಗೊಳಿಸಿದ ಭಾಷೆಯಿದೆ. ಅನುಭವವನ್ನು ಕಲೆಯಾಗಿಸಬೇಕೆಂಬ ಪ್ರಯತ್ನವಿದೆ.

ಉರುಳಿದಂತೆ ಹಗಲಿರುಳು / ಹೆಚ್ಚುತ್ತಾ ಹೋಗುವ ಮುಖದ / ಸುಕ್ಕುಗೆರೆಗಳ ಮೇಲೆ / ತುಂಬುತ್ತಾ; ಬರಗಾಲದ ಬಾವಿಯಾದ / ಕೆನ್ನೆ–ಕಣ್ಣುಗಳ ಒಳಗೆ – ಸಿದ್ಧಗೊಳಿಸಿದ ದಿನಚರಿಗಳು । ಇಟ್ಟಿದ್ದೇವೆ । ಉಚಿತ ಪ್ರದರ್ಶನಕ್ಕೆ । (ಕಾರ್ಮಿಕರ ದಿನಚರಿ)

ಗಡಸು-ಬಿರುಸು ನೀಗಿಕೊಂಡ ತಣ್ಣನೆಯ ಭಾಷೆಯ ಸಂಯಮವಿದ್ದರೂ ಸಶಕ್ತ ಅಭಿವ್ಯಕ್ತಿಯಿದೆ. ಗ್ರಾಂಥಿಕ ಭಾಷೆಯ ಶಿಸ್ತನ್ನು ಉಳಿಸಿ ಕೊಂಡಿರುವ ಪರೀಘ್ ಅದರಿಂದ ತಪ್ಪಿಸಿಕೊಳ್ಳಲೆಂದು ಬಳಸಿದ ಉತ್ತರ ಕರ್ನಾಟಕದ ಭಾಷೆ ಅಷ್ಟೇನೂ ಹಿತವಾಗಿಲ್ಲ. ಹಾಗೆಯೇ ಆಡುಮಾತಿನ ಬಳಕೆಯ ಪ್ರಯತ್ನಕೂಡ. ಆದರೆ ಬದುಕಿನ ಆರೋಗ್ಯಕ್ಕೆ ನಂಜಾಗಬಲ್ಲ ಸಂಗತಿಗಳ ಕುರಿತು ರೋಷ ಎದ್ದು ಕಾಣುವಂತೆಯೇ ಮಾನವ ಕಲ್ಯಾಣದ ಕನಸುಗಾರಿಕೆ ಕಾಳಜಿಗಳು ಅವರ ಕವನ ಗಳಲ್ಲಿ ದಟ್ಟವಾಗಿ ಪ್ರಕಟವಾಗಿವೆ.

ಹೆದರುತ್ತಿವೆ ಮಾನವನ ನೀತಿಗೆ । ಆದಿ ಅಂತ್ಯವಿಲ್ಲದ ಭೀತಿಗೆ । ಎಲ್ಲಕ್ಕಿಂತಲೂ ತಾನೇ ಬಲ ।' ಶ್ರೇಷ್ಠ ತನ್ನ ಕುಲ ಎಂಬ ಹುಚ್ಚು। ಇಡುತ್ತಿದೆ ಶಾಂತಿಯ ಸೌಧಕ್ಕೆ ಕಿಚ್ಚು(ಸೈತಾನ) ಗಜಲ್ ಪ್ರೇರಿತ ಕವನಗಳಲ್ಲಿ 'ಮಾತನಾಡಿದ ಮೌನ'ದ ಕೆಲವು ಕವನಗಳಲ್ಲಿ ಅವರ ಕಲಾತ್ಮಕತೆಯನ್ನು ಪ್ರಯೋಗ ಶೀಲತೆಯನ್ನು ಗುರುತಿಸ ಬಹುದು. ಬೆಳವಣಿಗೆಯ ಪ್ರಯತ್ನ ಪೂರ್ವಕ ನಡಿಗೆ 'ಮಾತನಾಡಿದ ಮೌನ' ದಲ್ಲಿ ಶಬ್ದವಾಗಿರುವುದರಿಂದ ಕವಿ ಪರೀಘ್‌ರ ಮುಂದಿನ ಬೆಳವಣಿಗೆಯನ್ನು ಭರವಸೆ ಯಿಂದ ಕಾಯಬಹುದು.

* ಆರ್.ವಿ. ಭಂಡಾರಿ ಜಿಲ್ಲೆಯ ಹಾಗೂ ರಾಜ್ಯದ ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ಸಕ್ರಿಯವಾಗಿ ದುಡಿಯುತ್ತಿರುವವರು. ಒಳ್ಳೆಯವಾಗ್ಮಿಗಳೆಂದೂ ಹೆಸರು ಮಾಡಿರುವ ಅವರ ಮಾತು-ಬರಹಗಳಲ್ಲಿ ಶೋಷಣೆಯ ವಿರುದ್ಧದ ಪ್ರತಿಭಟನೆ, ಶೋಷಿತರ ಪರವಾದ ಕಾಳಜಿ ಎದ್ದುಕಾಣುತ್ತದೆ. 'ಕೊಲೆಗಾರನು ಪತ್ತೆಯಾಗಲಿಲ್ಲ', ಸಂಕಲನದ 'ನನ್ನಕವಿತೆ' ಯಲ್ಲಿ ಅವರು – ನೀನು ಕವಿಯಲ್ಲ। ಮಾತು ರಸಾತ್ಮಕವಲ್ಲ। ಸಂಕೀರ್ಣ, ಸಮಗ್ರತೆಯಿಲ್ಲ। ಎಂದೆನ್ನಬಹುದು, ಪ್ರಭು ಗಳೇ। ದೇವರಾಣೆ ನನಗೆ ಸೌಡಿಯಿಲ್ಲ । ಅನ್ನುತ್ತಾರೆ. 'ಶೋಷಿತರ ಕುರಿತು ಮಾಡಬೇಕಾದ ತುರ್ತಿನಲ್ಲಿ ಕಾವ್ಯಸಿದ್ಧಾಂತಗಳ ಬಗ್ಗೆ ಯೋಚಿಸಲು ಪುರುಸೊತ್ತಿಲ್ಲ' ಎನ್ನುವ ಅವರ ಕವನಗಳಲ್ಲಿ ಯಾತನಾತಪ್ತ ಕುದಿಯಿದೆ, ಒಡಲ ಜ್ವಾಲೆಯ ಭುಗಿಲಿದೆ. ಪ್ರತಿಭಟನೆಯ ರಭಸ-ಕಠೋರತೆಯನ್ನು ಮೆತ್ತಿಕೊಂಡು ಎದ್ದುನಿಲ್ಲುವ ಕವನದ ಧಾಟಿಯಲ್ಲಿ ರಾಚುವ ಘಾಟಿದೆ. ನಾವು ಮಾತಾಡ ತೊಡಗಿದರೆ । ಹಳೆ ಹರಕು ಸಿಂಹಾಸನಗಳೆಲ್ಲ। ಫಿನೈಲ್ ಸಿಂಪಡಿತ ಹುಳು।ಹಿಂಡಾಗಿ ಉದುರುವ ಹಾಗೆ। ಪಟ ಪಟ ಉದುರುತ್ತವೆ- ಭಂಡಾರಿ ಒಬ್ಬ ವಿಮರ್ಶಕರೂ ಆಗಿರುವುದರಿಂದ ತಮ್ಮ ಕವನಗಳನ್ನು ತುಸು ದೂರ ನಿಂತು ನೋಡಬಲ್ಲರು. ಅವರೇ ಹಿಮ್ಮಾತಿನಲ್ಲಿ ಹೇಳುವ "ನನ್ನ ಉದ್ದೇಶ ಕಲಾ ಮಾಧ್ಯಮದಲ್ಲಿ ಎಷ್ಟು ಫಲಿಸಿದೆ ಎಂಬುದನ್ನು ನಿರ್ಣಯಿಸುವವರು ಸಹೃದಯರು ಮತ್ತು ವಿಮರ್ಶಕರು"

ಎಂಬ ಪ್ರಾಮಾಣಿಕ ನಿಲವನ್ನು ಒಪ್ಪಿಕೊಳ್ಳುತ್ತಲೂ 'ಅಂಗಡಿಯ ಮುಂದೆ ನಿಂತ ಹುಡುಗ' 'ಕೊಲೆಗಾರನ ಪತ್ತೆಯಾಗಲಿಲ್ಲ'ದಂತಹ ಕವನಗಳು ತಮ್ಮೊಳಗಿನ ಕೊರೆಯುವ ಯಾತನೆಯನ್ನು ಸಹೃದಯರಿಗೆ ಕಮ್ಯುನಿಕೇಟ್ ಮಾಡುವಲ್ಲಿ ಯಶಸ್ವಿಯಾಗಿರುವುದನ್ನು ಗಮನಿಸಿದರೆ ಅವರ ವಿನಯವನ್ನು ಮೆಚ್ಚಿಕೊಳ್ಳ ಬೇಕಾಗುತ್ತದೆ. ಈ ಸಂಕಲನದ 'ದಿನಕರ ದೇಸಾಯಿ' ಚಿಕ್ಕದಾದರೂ ಒಂದು ಸಶಕ್ತ ಕವನ. 'ದೀಪಾವಳಿ' ಕಥನದ ಧಾಟಿಯಿಂದಲೇ ಗೆಲ್ಲುತ್ತದೆ.

* ಬಂಡಾಯ ಸಾಹಿತ್ಯ ಸಂಘಟನೆಯ ಮುಂಚೂಣಿಯಲ್ಲಿರುವ ಮತ್ತೊಬ್ಬ ಕವಿ ಜಿ.ಎಸ್. ಅವಧಾನಿಯವರ ಇತ್ತೀಚಿನ ಸಂಕಲನ 'ಹೊತ್ತು ಮುಳುಗುವ ಮುನ್ನ' ದಲ್ಲಿ ಬೆಳವಣಿಗೆಯ ಹೆಜ್ಜೆ ಗುರುತು ಢಾಳಾಗಿದೆ. ಭಾಷೆಯ ಹೆಣಿಕೆಯ ಕುರಿತ ನವ್ಯರ ಎಚ್ಚರ ಹಾಗೂ ಬರೆಯುವ ತುರ್ತಿನೊಂದಿಗೆ ಕಾವ್ಯವಾಗಿಸಬೇಕೆಂಬ ಕಾಳಜಿ ಅವಧಾನಿಯವರ ಕವನಗಳಲ್ಲಿ ಕಾಣುವ ಗುಣ. ಆದ್ದರಿಂದಲೇ ಭಾಷೆ ಯಲ್ಲಿ ಮೂರ್ತಗೊಳ್ಳುವ ನೋವು ಘೋಷಣೆಯಾಗದ ಹಾಗೆ–ವರದಿಯಾಗದ ಹಾಗೆ ನಾಜೂಕಿನಿಂದ ತೂಕವನ್ನು ಕಾಯ್ದುಕೊಳ್ಳಬಲ್ಲರು. ತಮ್ಮ ಪರಿಸರದ ಆಡುಮಾತನ್ನೂ ಒಳಗೊಳ್ಳುವ ಭಾಷೆಯೊಂದಿಗಿನ ಅವರ ವ್ಯವಹರಣೆಯಲ್ಲಿ ಸ್ವೋಪಜ್ಞತೆ–ಬಿಗಿ ಇದ್ದರೂ ಸಂವಹನಕ್ಕೆ ಅಡ್ಡಿಯಾಗಿ ನಿಲ್ಲುವುದಿಲ್ಲ. ಇವೆಲ್ಲ ಕ್ಕಿಂತ ನನಗೆ ಮುಖ್ಯವಾಗುವುದು – ಗದ್ಯಕ್ಕೇ ಹತ್ತಿರವಾದ ಭಾಷೆಯನ್ನು ಬಳಸಿ ಕೊಳ್ಳುತ್ತಲೂ ಮಧ್ಯೆ ಕತ್ತರಿಸಿಕೊಳ್ಳದ ಪ್ರವಹನಶೀಲಲಯ ಮತ್ತು ಶುಷ್ಕ ವಾಗದಂತೆ ಭಾಷೆಯನ್ನ ಸಿಂಗರಿಸುವ ಪರಿ. ಅಭಿವ್ಯಕ್ತಿಯ ಅನನ್ಯತೆಯಲ್ಲಿಯೇ ನಿಜವಾದ ಕಾವ್ಯ ಆಕಾರ ಪಡೆದುಕೊಳ್ಳುವುದೆಂಬುದನ್ನು ಅವರ 'ಹೊತ್ತು ಮುಳುಗುವ ಮುನ್ನ' (ಸಂಕಲನದ ಹೆಸರು ಕೂಡ) ಕವನ ಸಾಬೀತು ಪಡಿಸುತ್ತದೆ. ಕವನಗಳಲ್ಲಿ ಬಂಡಾಯದ ಮನೋಧರ್ಮವಿದ್ದರೂ ಕಾವ್ಯದ ಸಾಧ್ಯತೆಗಳನ್ನು ಹಿಗ್ಗಿಸಿಕೊಂಡ ನವ್ಯರ ಸಾಧನೆ ಇಲ್ಲಿ ಎದ್ದು ಕಾಣುತ್ತದೆ.

ಈ ಅನಾದಿ ಕಾಡಿನಲ್ಲೆಲ್ಲಾ ಮುರಿದಾತ್ಮಗಳ ಗೆಲ್ಲು । ಘೀಳಿಡುವ ಖಾಖಿ–ಖಾದಿಗಳ ಗೆರಿಲ್ಲಾ ಗುಲ್ಲು । ನಾಮಗೀಮಗಳ ಸವ್ಯಾಪಸವ್ಯಗಳ ಮಂತ್ರ ಮರಕುಟಿಗ ಕೊಕ್ಕು । ಹೃದಯ ದ್ರವ್ಯವನೊತ್ತೆಯಿಟ್ಟ ಅಧಿಕಾರದಶ್ವಮೇಧದ ಕುದುರೆ । ನೆಲಕಚ್ಚಿದ ಎಲುಬುಗಳನೊದ್ದು ಕೆನೆಯುವ ಕಮನೀಯಗತ್ತು । ಪಕ ಪಕ ನಗೆಗೊಂದಾಗಿ ಉದುರುವ ರಕ್ತಬೀಜಸೃಷ್ಟಿ । ಗರಬಡಿದ ಬದುಕಿನ ಸುತ್ತ ಅಂಗುಲಂಗುಲದ ಅಜಗರದಪ್ಪುಗೆ ( ಹೊತ್ತು ಮುಳುಗುವ ಮುನ್ನ ) ಸಾಲು ಸಾಲುಗಳಲ್ಲಿ ಪ್ರತಿಮೆಗಳ ಮೆರವಣಿಗೆ ಮಾಡಿಸುವ ಅವಧಾನಿ ಅನುಭವದ ಸಿಪ್ಪೆಸುಲಿಯುತ್ತ ನಿಜದ ಅಂತರ್ದರ್ಶನ ಮಾಡಿಸುವಾಗ ಹದದ ಅದ್ದು ಮೀರ

ವೀರದಂತೆ ವೇದನೆಗೆ ದನಿಕೊಡುತ್ತಾರೆ. 'ಶಿಖಂಡಿಯ ಅನ್ನದ ಪದ' 'ಉತ್ತರಾಯಣಕೆ ಕಾಯುವುದಿಲ್ಲ' ಕವನಗಳನ್ನು ಈ ಮಾತಿಗಾಗಿ ನೋಡಬಹುದು.

............ ನನ್ನ ಉಡಿಯಲ್ಲೂ ಹಾಡುಂಟು / ನರನರದಲ್ಲಿ ತುಡಿವ ನೋವುಂಟು / ಹೃದಯದಲ್ಲೊಂದಿಷ್ಟು ಪ್ರೀತಿಯುಂಟು /......................./ ಪಾಳಿ ಬಂದಿದೆ ನಂದು, ಕೇಳಿ ಹಾಡುವೆನೀಗ / ನನ್ನ ಕವಿತೆ (ಉತ್ತರಾಯಣಕೆ ಕಾಯುವುದಿಲ್ಲ) 'ಬದುಕು' ಕವನದಲ್ಲಿ ವಿಭಿನ್ನ ವಿವರಗಳನ್ನೊಪ್ಪಿಸುವ ಕೌಶಲ, 'ಸಂಭಾವಿತರಿಗೆ, ಧ್ವನಿವರ್ಧಕ' ಗಳ ನವುರಾದ ವ್ಯಂಗ್ಯ ಉಲ್ಲೇಖಾರ್ಹ'. ಕವನದ ಆಶಯವನ್ನು ಕೊನೆಯ ೨-೩ ಸಾಲಿನಲ್ಲಿ ಕೆನೆಗಟ್ಟಿಸುವುದು, ಅದನ್ನೇ ತಲೆಬರೆಹವಾಗಿಸುವುದು ಅವಧಾನಿ ವೈಶಿಷ್ಟ್ಯ. ಒಟ್ಟಿನಲ್ಲಿ ಆರ್ದ್ರವಾಗಿಸುವ ಅನುಭವದ ಮುಖಾಮುಖಿಯಲ್ಲಿ ಅದನ್ನು ಕಾವ್ಯವಾಗಿಸುವ ಸವಾಲನ್ನು ಎದುರಿಸುವ ಪ್ರಯತ್ನ ಬಹುಮಟ್ಟಿಗೆ ಸಫಲವಾಗಿದೆ.

* ಡಾ|| ಸುಮಾ ಹೆಬ್ಬಾರ್ 'ಹಿಮವಾಗುತ್ತಿದೆ ಮನ' ತನ್ನ ವಿಶಿಷ್ಟತೆಯಿಂದ ಅವರ ಕುರಿತು ಹೆಚ್ಚಿನ ನಿರೀಕ್ಷೆಯಿಡುವಂತೆ ಮಾಡುತ್ತದೆ. ಹೆಬ್ಬಾರ್‌ರ ಕವನಗಳಲ್ಲಿ ಆಪ್ತ ಸಂವಾದದ ಥರಾ ತಟ್ಟುವ ಗುಣವಿದೆ. ಸಹೃದಯನ ಜೊತೆ ಯಾವ ಸಂಕೋಚವಿಲ್ಲದೆ, ನೇರ ಮಾತಿಗಿಳಿಯುವ ಸಲಿಗೆಯ ಧಾಟಿಯಿದೆ. ಎದುರು ನಿಲ್ಲುವ ಸವಾಲುಗಳಿಗೆ ಸ್ವಗತದಲ್ಲೇ ಉತ್ತರ ಹೇಳಿಕೊಳ್ಳುತ್ತ, ಜುಮ್ಮೆನಿಸುವ ತಲ್ಲಣಗಳನ್ನು ಸಲೀಸಾಗಿ ವರದಿ ಮಾಡುತ್ತ ಹೋಗುವುದರ ಮೂಲಕ ಆತಂಕಗಳನ್ನು ಸಡಿಲಿಸಿಕೊಂಡು ಹಾಯೆನಿಸುವ ನೆಮ್ಮದಿ ಅನುಭವಿಸುವ ಖಾಸ್ ಮಾತುಕತೆಗಳಾಗಿ ಬಿಡುತ್ತವೆ ಅವರ ಕವನಗಳು.

ಗಾಢವಿಷಾದದ ನೆರಳೊಂದು ತಣ್ಣಗೆ ಇಡಿಯಾಗಿ ಆವರಿಸುತ್ತಾ, ಅಸ್ತಿತ್ವವನ್ನೇ ಕಬಳಿಸಿ ಬಿಡುವ ಕ್ಷಣದ ಮೂಕ ಯಾತನೆಯ ಕಸಿವಿಸಿಯನ್ನು ಹೆಚ್ಚಿನ ಕವನಗಳು ದಾಖಲಿಸುತ್ತವೆ.

ನಾನು । ಆಳಕ್ಕೂ ಇಲ್ದೆ । ಆಕಾರಕ್ಕೂ ಇಲ್ದೆ। ನನಗೂ ಇಲ್ದೆ ।
ಯಾರಿಗೂ ಇಲ್ದೆ । ಇಲ್ದೆ ಇದ್ದೇನೆ। (ಇಲ್ದೆ ಇದ್ದೇನೆ) ಹುಡುಕಾಟದ ಗೋಜಲಿಗೆ ಬದುಕನ್ನು ಒಪ್ಪಿಸುವುದಕ್ಕಿಂತ, ಯಾವ ಕಮಿಟ್‌ಮೆಂಟ್ ಇಲ್ಲದೆ ಬಂದಂತೆ ಒಪ್ಪಿಕೊಳ್ಳಬಾರದೇಕೆ ಎನ್ನುವ ಸುಮಾ ಹೆಬ್ಬಾರ್ ಕೇಳುತ್ತಾರೆ–

ಒಮ್ಮೆ । ಹಿಂಗss, ಹಂಗss, ಅದಕss, ಇದಕss । ಅಂತ ಅನ್ನೊದು ಬಿಟ್ಟು । ಸುಮ್ಮನೆ ಬದುಕಿ ಬಿಡಬಾರದೇಕೆ ? (ಸುಮ್ಮನೆ ಬದುಕಿಬಿಡಬಾರದೇಕೆ)

ಅಂಟಿಕೊಂಡು ಉರಿಯುವ ಭಾವನೆಗಳನ್ನು ಶಬ್ದಗಳಲ್ಲಿ ಕಳಚಿಕೊಳ್ಳುವಾಗ ಹಸಿಯಾಗಿ ಪದಗಳಿಗೆ ಹತ್ತಿಕೊಂಡು ಬಂದಿದ್ದರೂ ಹೇಳುವ ರೀತಿಯಲ್ಲಿ ಖುಷಿಕೊಡುವ ಗುಣವಿದೆ. ತೀವ್ರವಾಗಿ ಆವರಿಸಿ ನಿಲ್ಲುವ ತೇವಭಾವದ ನಡುವೆಯೂ, ವೈಮರೆಯಲಾಗದ ಆತಂಕಗಳಾಗಿ ಎದ್ದು ನಿಲ್ಲುವ ಆಲೋಚನೆಗಳನ್ನು, Sensitive ಆಗಿದ್ದರೂ Sentimental ಆಗಿರದ ಎಚ್ಚರವನ್ನು ಮೃದುವಾಗಿ ಹಿಡಿದಿಡುತ್ತವೆ–ಸುಮಾ ಹೆಬ್ಬಾರ್ ಕವನಗಳು.

* 'ಉತ್ಸವದಿಂದ ಉತ್ಸವಕ್ಕೆ' ಎಂಬ ಅರ್ಥಪೂರ್ಣ ಟೈಟಲ್ ಹೊತ್ತ ಸಂಕಲನ ಕೊಟ್ಟವರು ಮಾಧವಿ ಭಂಡಾರಿ. ಕ್ರೂರವಾಸ್ತವಗಳು ಕಾಡುವಾಗ ಕವಿ ಸುಮ್ಮನಿರುವುದಾದರೂ ಹೇಗೆ! ಮನುಷ್ಯ ಸಂಬಂಧಗಳ ತೇವ ಒಣಗುತ್ತ, ಸಭೆ–ಸಮಾರಂಭ–ಭಾಷಣಗಳಲ್ಲಿ ಅರ್ಥಹೀನವಾಗುತ್ತ ಕನಸುಗಳನ್ನು ಕೊಲ್ಲತೊಡಗಿದರೆ ಕನಸುಬಿದ್ದಿತಾದರೂ ಹೇಗೆ!

ಯಾಕೆ ಇತ್ತೀಚೆಗೆ ಕನಸುಗಳೇಕವಿಮ್ಮಿ । ಎದ್ದಾಗ ವಾಸ್ತವದ ಕೀರ್ತನೆ । ಶಬ್ದಗಳ ನಡುವೆ । ಸಿಂಗರಿಸಿದ ಯಾತನೆ। (ಶಬ್ದಗಳ ನಡುವೆ) ಉತ್ಸವದಿಂದ ಉತ್ಸವಕ್ಕೆ ದಿನಗಳ ಸರಿದರೂ ಬದಲಾವಣೆಯಿಲ್ಲದೆ ನಿಂತಬದುಕಿನ ನೋವು ಅವರನ್ನು ಕಾಡುತ್ತದೆ. ಇದರ ಅರಿವು ಇಲ್ಲದ ಮುಗ್ಧತೆ, ಅರಿವಿದ್ದರೂ ಬದಲಾಯಿಸಲಾಗದ ಅಸಹಾಯಕತೆಯನ್ನು, ಮಡುಗಟ್ಟಿದ ವೇದನೆಯನ್ನು ಕಟುವಿಡಂಬನೆಯಲ್ಲಿ ಕಟ್ಟಿಕೊಡುವ ಶಕ್ತಿ ಮಾಧವಿಯರ ಭಾಷೆಗಿದೆ.

ಹೆಂಗೆಳೆಯರು । ತರತರದ ರಂಗೋಲಿಬಿಡಿಸಿ । ಕಾಯುತ್ತಿದ್ದಾರೆ ಸರ್ವಾಂತರ್ಯಾಮಿಗಾಗಿ । ಆದರೆ । ಅಲ್ಲಿ ಯೆಂಕ್ಟಪ್ಪನ ಕೇರಿಯ ಮುರುಕು ಗುಡಿಸಲುಗಳ ಗಂಜಿ ಕುಡಿಕೆಗಳಲ್ಲಿ ಬಿದ್ದ । ನೊಣ ರೆಕ್ಕೆ ಬಡಿದುಕೊಂಡದ್ದೇ ಗೊತ್ತಾಗಲಿಲ್ಲ (ಉತ್ಸವದಿಂದ ಉತ್ಸವಕ್ಕೆ) ಕ್ರೂರ ವಾಸ್ತವದ ಅನಾವರಣಗೊಳಿಸಬಲ್ಲ ಸಾಮರ್ಥ್ಯ ಶಬ್ದಗಳಿಗಿವೆಯೆಂಬ ಭರವಸೆಯ ನಡುವೆ ಒಮ್ಮೊಮ್ಮೆ ಇವು ವ್ಯವಸ್ಥೆಯ ಜೊತೆ ರಾಜಿ ಮಾಡಿಕೊಂಡುಬಿಟ್ಟಾವೆಯೇ ಎಂಬ ಭಯ ಅವರಿಗೆ.

ಒಳಗೊಳಗೇ ಒಪ್ಪಂದದ ಈ ಶಬ್ದಗಳ । ಮುಸುಕು ಹರಿಯಬೇಕು. ಎನ್ನುವ ಮಾಧವಿ ತಪ್ತತೆಯನ್ನು ನಿರಂತರ ಕಾಯ್ದುಕೊಳ್ಳುವ ಪ್ರಯತ್ನಮಾಡುತ್ತಾರೆ. ಅವರ ಸಂಕಲದಲ್ಲಿ ಕೆಲವು ಒಳ್ಳೆಯ ಮಿನಿಗವನಗಳು ಹಾಗೂ ಹಿಂದಿಯಿಂದ ಅನುವಾದಿಸಿದ ಕವನಗಳೂ ಇವೆ.

* 'ಸ್ಮೃತಿ' ಪ್ರಕಾಶನದ ಮೂಲಕ ಪುಸ್ತಕಗಳನ್ನು ಪ್ರಕಟಿಸುತ್ತಿರುವ ವಿ.ಗ. ನಾಯಕರ 'ಅನ್ವೇಷಣೆ' ಮತ್ತು 'ಗೋಲಗುಮ್ಮಟ' ಎರಡು ಸಂಕಲನಗಳು

ಪ್ರಕಟವಾಗಿವೆ. ಐವತ್ತಾರು ಕಿರುಗವನಗಳ 'ಗೋಲಗುಮ್ಮಟ' ಮೊದಲ ನೋಟಕ್ಕೆ ಹೆಣ್ಣಿನ ಎದೆಯನ್ನು ಕುರಿತು ಬರೆದ ರಸಿಕ ಕಾವ್ಯವೆನಿಸಿದರೂ, ಪದಗಳನ್ನೆಲ್ಲಾ ಎಚ್ಚರದಿಂದ ಹಿಂಜಿದರೆ ಹೊರಡುವ ಅರ್ಥಪೂರ್ಣ ಶ್ಲೇಷೆ ಮಾನವ ಮಾತ್ರದ ಎದೆಯ (ಹೃದಯದ) ಬಗೆಗಿನ ಚಿಂತನೆಯಾಗಿ ಪ್ರಕಟಗೊಳ್ಳುತ್ತ ವಿಸ್ಮಯಕಾರಿ ಅನುಭವ ಒದಗಿಸುತ್ತವೆ. ಕವನದ ಸಾಲುಗಳನ್ನು ಚಿಕ್ಕ ಚಿಕ್ಕ ಪದಗಳಾಗಿ ಒಡೆಯುತ್ತಾ, ಒಡೆಯುವುದರ ಮೂಲಕವೇ ಹೊಸ ಅರ್ಥದ ಪರೆ ಕಳಚುವ ರೀತಿ ನವೀನಬಗೆಯದು, ಭಾಷೆಯ ಬಳಕೆಯಲ್ಲಿ ಸಂಯಮವಿದೆ, ಜಾಗರೂಕತೆಯ ಸಂಯೋಜನೆಯಿದೆ.

ಎಳತು ಎದೆ। ಮಿಡಿ ಬಿರುಸು। ಪಕ್ವತೆ ಎದೆ।ರಸ ಉಣಿಸು। ಮಾನವೀಯ ಅಂತಃಕರಣದ ರಸ ಮಾಗಿದ ಹೃದಯದಲ್ಲಿ ಹನಿಯುವ ಹಾಗೆ ಎಳಸು ಹೃದಯಕ್ಕೆಲ್ಲ ಸಾಧ್ಯ! ಈ ರೀತಿ ಹೃದಯವೈಶಾಲ್ಯವನ್ನು ಅಪೇಕ್ಷಿಸುವ ಸಾಲುಗಳಲ್ಲಿ ಅಶ್ಲೀಲತೆಯೆಲ್ಲಿದೆ! ಮನುಷ್ಯ ಸಂಬಂಧವನ್ನು ಗಟ್ಟಿಗೊಳಿಸುವ ಹಂಬಲ ಎದೆಯ ಕುರಿತ ಈ ಕವನಗಳಲ್ಲಿ ಇದ್ದರೂ ಮೊದಲ ಓದಿನ ವಾಚ್ಯಾರ್ಥವನ್ನು ನಿರಾಕರಿಸಿ ಮತ್ತೆ ಮತ್ತೆ ವಾಚಿಸಿದರೆ ಮಾತ್ರ ಎದೆಯಾಳವನ್ನು ಬಗೆದ ಒಳನೋಟವೊಂದು ಕಾಣ ಸಿಗುತ್ತದೆ, ಮತ್ತು ಈ ಮೂಲಕ ಶಬ್ದಗಳ ಜೊತೆ ನಡೆಸುವ ಆಟ ಆಕ್ಷಣದ ಖುಷಿಯನ್ನು ಒದಗಿಸುತ್ತದೆ. ಅರ್ಥ ಸಾಧ್ಯತೆಗಳನ್ನು ದುಡಿದುಕೊಳ್ಳುವ ಪೈಪೋಟಿ ಇಲ್ಲಿನ ಕವನಗಳ ಪದಪದಗಳಲ್ಲಿಯೂ ಮಿಂಚಿದೆ.

* ವೇದವತಿ ಅವರ 'ಅಹವಾಲು' ಸಂಕಲನಕ್ಕೆ ಶ್ರೀ ಎಚ್.ಎಸ್. ವೆಂಕಟೇಶಮೂರ್ತಿಯವರು ಕೆಲವು ಮಾತುಗಳನ್ನು ಬರೆದಿದ್ದಾರೆ. ಹಾಗೆ ಬರೆಯುತ್ತ ಒಟ್ಟಾರೆಯಾಗಿ ಯೋಚಿಸಬೇಕಾದ ಒಂದು ಸಂಗತಿಯತ್ತಾ ಗಮನ ಸೆಳೆಯುತ್ತಾರೆ. ಹೊಸ ಬರೆಹಗಾರರಿಗೆ ಬೇಕಾದ ಪ್ರೋತ್ಸಾಹ ಸಿಗುವ ಬದಲು "ನೀವು ಬರೆಯುವುದು ಏಕೆ? ಬರೆಯದಿದ್ದರೆ ಏನು ನಷ್ಟ?" ಎಂದು ಮೂತಿ ವಕ್ರಮಾಡುವ ಮಹಾನುಭಾವರು ಸಮ್ಮ ಸುತ್ತಾ ಇದ್ದಾರೆ–ಎಂದ ವೆಂಕಟೇಶಮೂರ್ತಿ ವೇದವತಿಯವರ ಅಮೂರ್ತ ಚಿಂತನೆಯ ಬಗೆಗೆ, ಫ್ರೆಷ್ ಅಲ್ಲದ ಭಾಷೆಯ ಬಗೆಗೆ ಹೇಳುವಾಗ ಸಾಮರ್ಥ್ಯವನ್ನು ಸರಿಯಾಗಿಯೇ ಗುರುತಿಸಿದ್ದಾರೆ.

೧) ಸುಟ್ಟ ಹೃದಯದ ನಡುವೆ । ನರಳುವ ಹೊರಳುವ । ನೆನಪುಗಳ ಗರಗಸದಲ್ಲಿ । ಹುಡಿ ಹುಡಿ (ಅನಿವಾರ್ಯ)

೨) ಹೂಮನದ ಅಶ್ರುಜಲ । ರೆಪ್ಪೆಗಿಳಿದು ಕದಪ ತಬ್ಬಿತಲ್ಲ(ಇಬ್ಬಂದಿ)

ವೇದವತಿಯವರ ಕವನಗಳಲ್ಲಿ ಅನುಭವಕ್ಕೆ ಸಮೀಪವಾದ ಪದಗಳ

ಆಯ್ಕೆಯಿದೆ. ನಾದಗುಣವನ್ನು ದುಡಿಸಿಕೊಳ್ಳುವ, ಅಭಿವ್ಯಕ್ತಿಯಲ್ಲಿ ಸ್ವಂತಿಕೆಯನ್ನು ಶೋಧಿಸಿಕೊಳ್ಳುವ ಪ್ರಯತ್ನವಿದೆ. ಜೊತೆಗೆ ಲಯದ ಮೇಲೆ ಹಿಡಿತವಿದೆ. 'ಚಿಗುರಲಾರದ ಕನಸು' 'ಪ್ರಸ್ತುತ' 'ಬೇಕಿಲ್ಲದ ಬಂಧನ'– ಮುಂತಾದ ಉತ್ತಮ ಕವನಗಳು 'ಅಹವಾಲು' ಸಂಕಲನದಲ್ಲಿವೆ.

* ಪ್ರೊ|| ವೆಂಕಟೇಶ ಹುಣಸಿಕಟ್ಟಿ ಅವರ 'ವಿಜಯ ದಶಮಿ' ಸಂಕಲನದಲ್ಲಿ ನೂರೊಂದು ಕವನಗಳು-ಹನಿಗವನಗಳು ಇವೆ. ತುಂಬ ಸಲೀಸಾಗಿ ಬರೆಯಬಲ್ಲ ಇವರು ಕಾವ್ಯ ರಚನೆಯಲ್ಲಿ ಪ್ರಯೋಗಶೀಲರೂ ಹೌದು. ಉದಾಹರಣೆಗೆ ಈ ಸಂಕಲನದಲ್ಲಿ ಪ್ರಶ್ನೋತ್ತರ ಪದಗಳಿವೆ, ಡೊಳ್ಳಿನ ಪದಗಳಿವೆ, ಲಾವಣಿ ಪದಗಳಿವೆ ಗೀ ಗೀ ಪದದ ಧಾಟಿಯ ಕವನಗಳಿವೆ. ಪುಸ್ತಕದ ಬೆನ್ನಿಗಿರುವ ಬ್ಲರ್ಬ್ ಕವಿಯ ಹಾಗೂ ಸಾಹಿತ್ಯ ನಿರ್ಮಾಣದ ಪರಿಚಯವನ್ನು ಮಾಡಿಕೊಡುವುದರಿಂದ ಅದನ್ನೇ ಇಲ್ಲಿ ಕೊಡಲಾಗಿದೆ– "ಸಮರ್ಥ ಸ್ನಾತಕೋತ್ತರ ಪದವೀಧರ ಶಿಕ್ಷಕರಾದ ಪ್ರೊ:ವೆಂಕಟೇಶ ಹುಣಸಿಕಟ್ಟಿಯವರು ಔದ್ಯೋಗಿಕವಾಗಿ ಶಿಕ್ಷಣಕಲಾ ನಿಪುಣರಿರುವುದರ ಜೊತೆಗೆ ಸಾಹಿತ್ಯಕವಾಗಿ ಕಾವ್ಯ–ನಾಟಕ–ಕಾದಂಬರಿ–ವಿಮರ್ಶೆ ಹಾಗೂ ಪ್ರಬಂಧವೇ ಮೊದಲಾದ ವಿವಿಧ ಪ್ರಾಕಾರಗಳಲ್ಲಿ ಸಮರ್ಥರಾದ ಬರಹಗಾರರೆನ್ನುವುದು ಗಮನಾರ್ಹ. ಮಾನ್ಯರ ಹತ್ತಾರು ಬೆಲೆ ಬಾಳುವ ಹೊತ್ತಗೆಗಳು ............"

ಈ ಕಾವ್ಯಾತ್ಮಕ ಉದ್ಧರಣಗಳನ್ನು ಗಮನಿಸಿ :

೧) ವಿಚಾರಗಳ ತೊಲೆಗಂಬಕೆ । ತೊಗಲಬಾವಲಿಯಂತೆ । ಜೋತು ಬಿದ್ದ । ನಮಗಿಂದು....................

೨) ಹಸಿದ ಕಣ್ಣುಗಳು । ದಿಟ್ಟಿಸುತ್ತಲೇ ಇವೆ । ಆಶೆಯ ಏಣಿಯ ಮೇಲೆ । ಕುಳಿತು........................।

* ಶ್ರೀಪಾದ ಶೆಟ್ಟಿ (ಈಗ ಡಾ|| ಶ್ರೀಪಾದ ಶೆಟ್ಟಿ) ಅವರ ಒಂದು ಸಂಕಲನ 'ಪ್ರಿಯ ಶರಾವತಿ' ಪ್ರಕಟವಾಗಿದೆ. ಡಾ|| ಶೆಟ್ಟಿ ಜಿಲ್ಲೆಯ ಸಾಹಿತ್ಯಕ ವಲಯದಲ್ಲಿ ಎದ್ದು ಕಾಣುವ ವ್ಯಕ್ತಿ. ವಾಚಾಳಿತನ ಅವರ ಕಾವ್ಯದ ಪ್ರಧಾನ ಗುಣ. ಈ ಮಾತನ್ನು ಒಪ್ಪಿಕೊಳ್ಳುತ್ತ ಅವರೇ ಹೇಳುವಂತೆ –'ಕವಿತೆಯ ಮಾನದಂಡಕ್ಕಿಂತ ಸುಲಭ ಸಂವಹನ ಆಸುಪಾಸಿನ ಜನಕ್ಕೆ ಅರ್ಥವಾಗುವುದು' ಅವರಿಗೆ ಮುಖ್ಯ; ಇಲ್ಲವಾದರೆ ಕವಿತೆ ಕೇವಲ ಆಕಾಶಭಾಷಿತವಾಗಿ ಬಿಡಬಹುದು ಎಂಬ ಹೆದರಿಕೆ' ಅವರಿಗೆ. ಈ ಹೆದರಿಕೆಯಿಂದ ತಪ್ಪಿಸಿಕೊಂಡು ಅವರ ಕವನಗಳು ಸಾರ್ಥಕತೆ ಪಡೆದಿವೆ.

ಉ. ಕ. ಜಿಲ್ಲೆಯ ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ರಚನಾತ್ಮಕ ಕಾರ್ಯ ಮಾಡಿದ ಶೆಟ್ಟಿಯವರ ಹೆಚ್ಚಿನ ಕವನಗಳಲ್ಲಿ ಅವರ ಸುತ್ತಲಿನ ಸಮಾಜದ

ನಿಮ್ನಸ್ತರದ ಬದುಕಿನ ಕಟುವಾಸ್ತವದ ಚಿತ್ರಣವಿದೆ. ಕರಾವಳಿಯ ಬಡವರ ದುರ್ಭರ ಬದುಕಿನ ಪ್ರಾಮಾಣಿಕ ವ್ಯಾಖ್ಯಾನಗಳಾಗಿರುವ ಅವರ ಕವನಗಳಲ್ಲಿ ಒಳಗಿನ ಬಗೆಯನ್ನು ಬಗೆದು ನೋಡುವ ಗುಣವಿದೆ. ಬದುಕಿನ ಸಂಕೀರ್ಣ ಅನುಭವಗಳ ಸಂದರ್ಭದಲ್ಲಿ ಸಂವೇದನಶೀಲ ವ್ಯಕ್ತಿಯೊಬ್ಬನಿಗೆ ಎದುರಾಗುವ ಪ್ರಶ್ನೆಗಳ ಪ್ರಸ್ತಾಪವಿದೆ. ಸ್ವಗತ ನಿವೇದನೆಯಿದ್ದರೂ ಪ್ರವಹನಶೀಲ ಶೈಲಿಯಿದೆ.

ಗಟ್ಟಿಜನ ಸಿಕ್ಕಾಗ ಜೊಳ್ಳಾಗಿ ಜಳ್ಳಾಗಿ / ಬಲೂನಾಗಿ ಹಾರಿ ಹೋಗುವ ನಾನು / ಸಮಯಕ್ಕನುಗುಣವಾಗಿ ಬಣ್ಣ / ಬದಲಾಯಿಸುವ ಊಸರವಳ್ಳಿಯೋ ಬಿಚ್ಚುತ್ತಾ ಹೋದಂತೆ ಬಯಲಾಗುವ / ಏನೂ ಇಲ್ಲವಾಗುವ ನಾನೊಂದು ಉಳ್ಳಾಗಡ್ಡೆಯೆ ? / ಬ್ರಹ್ಮಸ್ವರೂಪಿಣಿಯೆ / ಅಸ್ತಿತ್ವವಾದಿಯೆ ಅಸ್ತಿತ್ವರಹಿತನೆ / ದಯಮಾಡಿ ಹೇಳಿ/ ನಾನು........ಯಾರು........? (ನಾನು ಯಾರು)'ಏಕಲವ್ಯ'ದ ನಾಟಕೀಯ ಶೈಲಿ, 'ನಾಮಕರಣವಾಗಿಲ್ಲ' ಕವನದ ಆಕರ್ಷಕ ಕಥನಗುಣ ಉಲ್ಲೇಖಾರ್ಹ. 'ಪ್ರಿಯ ಶರಾವತಿ' ಈ ಸಂಕಲನಕ್ಕೆ ಹೆಸರು ಕೊಟ್ಟ ಒಳ್ಳೆಯ ಕವನ. ಜೀವನದ ಹರಿವಿನೊಂದಿಗೆ ಒಂದಾದ ಶರಾವತಿಯ ನೋವು ನಲಿವುಗಳ ಮೂಲಕವೆ ತಮ್ಮ ಸುತ್ತಲಿನ ಜನರ ಹರ್ಷ-ವಿಷಾದಗಳನ್ನು ದಾಖಲಿಸುವ, ಆಪ್ತ ಸಂವಾದದ ಥರಾ ಸಾಗುವ ಈ ಕವನದ ಧಾಟಿ ತುಂಬ ಹಿತವಾಗಿದೆ.

ಕನಸು ಬೆಂಕಿಯಾಗಿ / ನೀರು ಮಹಾಪೂರವಾಗಿ / ಜೋಪಡಿಗಳೆಲ್ಲಾ ಕೊಚ್ಚಿ ಹೋಗುವಾಗ / ಚಟ್ಟೆಯ ಬಾರುಗಿನಲ್ಲಿ / ಕಂದಮ್ಮಗಳ ಕೂಗಿನಲ್ಲಿ/ಮೂಕ ಪಶುವಿನ ಆರ್ತ ದನಿಯಲ್ಲಿ /ಪ್ರಿಯ ಶರಾವತಿ/ನಿನ್ನ ಹೆಣ್ತನ ಅರಳುವುದಿಲ್ಲವೇನು ? ನಿನ್ನ ತಾಯ್ತನ ಕೊನರುವುದಿಲ್ಲವೇನು?(ಪ್ರಿಯ ಶರಾವತಿ) ದಲಿತ ಜನಾಂಗವೊಂದರ ಕಟು ವಾಸ್ತವವನ್ನು ಮಾತುಗಳಲ್ಲಿ ಹಿಡಿದಿರುವ ಪ್ರಯತ್ನ 'ಮುಕ್ರೀರ, ನಾವು ಮುಕ್ರೀರು' ಕವನದಲ್ಲಿದೆ. ಶೋಷಿತರ ಅನುಭವಗಳು ಹಸಿ ಹಸಿಯಾಗಿ ಆಕಾರ ಪಡೆದ ಈ ಕವನದಲ್ಲಿ ಅವರ ಯಶಸ್ಸು-ಮಿತಿಗಳೆರಡೂ ಕಾಣುತ್ತವೆ. ಆದರೆ ಬದುಕಿನ ಕುರಿತ ಪ್ರೀತಿಯನ್ನು ಮೆಚ್ಚಲೇಬೇಕು.

* ಕನ್ನಡ ನವ್ಯ ಕಾವ್ಯ ಪರಂಪರೆಯ ಆದ್ಯ ಪ್ರವರ್ತಕರಾದ ಕವಿ ವಿ.ಜಿ. ಭಟ್ಟರು ೧೯೮೩ರಿಂದೀಚೆಗೆ ಈವರೆಗೆ ಎಂಟು ಸಂಕಲನ ಕೊಟ್ಟವರು. ಈ ಹಿಂದೆ ಅವರ ಒಂಬತ್ತು ಸಂಕಲನಗಳು ಪ್ರಕಟವಾಗಿವೆ. ಬಹುಶಃ ಅವರಷ್ಟು ಸಂಕಲನಗಳನ್ನು ಕೊಟ್ಟ ಕವಿ ಈ ಜಿಲ್ಲೆಯಲ್ಲಿ ಮತ್ತೊಬ್ಬರಿಲ್ಲ; ಅವರ ಹಾಗೆ ಬರೆಯುವವರು ಕೂಡ. ಭಟ್ಟರದು ಅಪರೂಪದ ಶೈಲಿ, ಸಂಕಲನದಿಂದ ಸಂಕಲನಕ್ಕೆ ಎದ್ದು ಕಾಣುವ ಬೆಳವಣಿಗೆ, ಅವರೇ ಹೇಳುವಂತೆ 'ಮೂರ್ತಿ' ಮತ್ತು

'ಆತ್ಮ ಗೀತೆ' ಯಮೇಲೆ ಜಿ.ಕೆ. ಪ್ರಭಾವವಿದೆ. ಇತ್ತೀಚಿನ ಸಂಕಲನಗಳಲ್ಲಿ ರಜನೀಶ್ ನೆರಳು ಬಿದ್ದಿದೆ. ಭಟ್ಟರಲ್ಲಿ ಪೌರ್ವಾತ್ಯ-ಪಾಶ್ಚಾತ್ಯ ಆತ್ಮಜ್ಞಾನಗಳ ಸ್ಪರ್ಶದ ಲೇಪವಿದ್ದರೂ, ಅವುಗಳನ್ನು ಜೀರ್ಣಿಸಿಕೊಂಡು ಸ್ವಂತಿಕೆಗೆ ಧಕ್ಕೆ ಬಾರದಂತೆ ನೋಡಿಕೊಂಡಿದ್ದಾರೆ. ಹಾಗೆ ನೋಡಿದರೆ ವಿ.ಜಿ. ಭಟ್ಟರ ಮೇಲೆ ಬೇಂದ್ರೆ ಪ್ರಭಾವವೂ ಕಡಿಮೆಯದಲ್ಲ. ಆಡುಮಾತಿನ ಲಯ, ಭಾಷೆಯ ಕಸುವು, ಪದಪ್ರಯೋಗದ ಮೋಡಿ, ಸರಳ-ನಿರಾಡಂಬರ ಚೆಲುವು, ಕೊನೆಯ ದಿನಗಳ ಬೇಂದ್ರೆಯಂತೆಯೇ ಸಾಂಖ್ಯದ ಒಲವು-ಇವೆಲ್ಲ ಇದ್ದರೂ ಭಟ್ಟರ ಸ್ವಂತಿಕೆ ಎದ್ದು ಕಾಣುತ್ತದೆ. ಜೊತೆಗೆ ಅವರ ಕಾವ್ಯದಲ್ಲಿ **wit** ಮತ್ತು **humor** ಮತ್ತು **irony** ಗಳು ಬಳಕೆಯಾಗುವ ರೀತಿ ಖಾಸ್ ಅವರವೇ. ಹುಡುಗಾಟಿಕೆ-ಲೇವಡಿಯೊಂದಿಗೆ ಲವಲವಿಕೆಯೂ ಸೇರಿಕೊಂಡು ತಟ್ಟುವ ಗುಣವನ್ನು ಹೊಂದಿವೆ.

ಸುಮಾರು ಒಂದೂವರೆ ದಶಕದಷ್ಟು ಕಾಲ ಯಾವ ಸಂಕಲನವನ್ನೂ ಪ್ರಕಟಿಸದೇ ಇದ್ದ ವಿ.ಜಿ. ಭಟ್ಟರು ೯೦ ರ ದಶಕದಲ್ಲಿ ಎಂಟು ಸಂಕಲನ ಕೊಟ್ಟಿದ್ದಾರೆಂಬುದು ಗಮನಾರ್ಹ. ಭಟ್ಟರ ಪ್ರಯೋಗಶೀಲತೆ ಈ ಸಂಕಲನದ ಕವಿತೆಗಳಲ್ಲಿ ಮಿಂಚಿದೆ. ಹಾಗೆಯೇ ಕವನಗಳ ವಸ್ತು ವೈವಿಧ್ಯ ಕೂಡ. ಯಃಕಶ್ಚಿತವೆನಿಸುವ ಸಂಗತಿಯ ಮೂಲಕವೂ ಗಂಭೀರ ಚಿಂತನೆಯ ಆಳಕ್ಕೆ ಬೆಳಕು ಚೆಲ್ಲಬಲ್ಲರು ಅವರು. 'ಲಹರಿ' ಸಂಕಲನಕ್ಕೆ ಅವರು ಕ್ಷುದ್ರಗೀತೆಗಳು ಎಂದು ವಿವರಣೆ ಕೊಟ್ಟಿರುವುದನ್ನು ನೆನಪಿಸಿಕೊಳ್ಳಬಹುದು. 'ಲಹರಿ' ಯಲ್ಲಿ ಹರಿಬಿಡುವ ತುಂಟತನ, 'ಧ್ಯಾನಪೀಠ' ದಲ್ಲಿ ಮಂಡಿಸಿದ ರಜನೀಶ್ ತಾತ್ವಿಕ ಚಿಂತನೆ 'ಕತ್ತೆಯ ಕನಸು' ನಲ್ಲಿ ಮಿಂಚಿದ ಸತ್ಯದ ದರ್ಶನ, ಬದುಕಿನ ಮುಕ್ತ ಅನುಭವಿಗಳಿಗೆ ಸ್ವಾಗತ ನೀಡಿದ 'ಸ್ವಾಗತಂ'- ಇವುಗಳನ್ನು ಪರಿಶೀಲಿಸುತ್ತಾ 'ರಚನೆಯಿಂದ ವಿಸರ್ಜನೆಗೆ' ಬಂದರೆ, ವಿ.ಜಿ. ಭಟ್ಟರನ್ನು ಯಾವುದೇ ಪಂಥಕ್ಕೆ ಸೇರಿಸುವುದು ಎಷ್ಟು ಕಷ್ಟ ಎನ್ನುವುದು ಗೊತ್ತಾಗುತ್ತದೆ. ವೈಯುಕ್ತಿಕ ಅನುಭವಗಳ ಶೋಧವಾಗಿ ಕಾವ್ಯ ಸೃಷ್ಟಿ ನಡೆಯುತ್ತಿರುವಾಗ ಈ ನಿರಂತರತೆಯನ್ನು ಖಂಡಿಸಿ ಒಂದು ಮಾರ್ಗಕ್ಕೆ ಜೋಡಿಸುವುದು ಸುಲಭವಲ್ಲ.

ಪ್ರತಿದಿನ ಹೊಸ ಹೊಸ ಮಕ್ಕಳ ಜನನವು/ಏಕೆಂಬುದ ನಾ ಬಲ್ಲೆ /ಪೂರ್ಣ ಮಾನವನ ನಿರ್ಮಾಣದಲಿಹ / ಸತತ ಯತ್ನದಲ್ಲೇ / ಪರಮನು / ನಿತ್ಯಾ ಸಾಧನೆಯಲ್ಲೇ. (ಸೃಜನ)

ಉದ್ಘಾಟಿಸು, ನಡೆ, ಅನ್ವೇಷಿಸು ನಡೆ / ಶೋಧಿಸು ಮಾಡದೆ ನಕಲು/ 'ಸ್ವತಂತ್ರ ಯತ್ನತೆ' ಉಪಯೋಗಕೆ ಇದೆ । ಪರಮ ಪ್ರಸಾದದ ಅಕಲು (ಕಲಿಕೆ)

ವಿ. ಜಿ. ಭಟ್ಟರ ಭಾವಯಿತ್ರೀ–ಕಾರಯಿತ್ರೀ ಪ್ರತಿಭೆಗಳೆರಡರ ಹರಿವನ್ನು, ಅದರ ಫಲವತ್ತಾದ ಸೃಷ್ಟಿಯನ್ನು ಪ್ರತ್ಯೇಕ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯತೆ ಇದೆ. ಕಾವ್ಯಶೈಲಿ ಹಾಗೂ ಚಿಂತನೆಯ ಹೊಸತನಗಳ ಅಪೂರ್ವ ಸಂಗಮವಾದ ವಿ.ಜಿ. ಭಟ್ಟರ ಕೃತಿಗಳ ಸಂಖ್ಯೆ ಹಾಗೂ ಸತ್ವಗಳನ್ನು ಗಮನಿಸಿದರೆ ಚಿಕ್ಕ ಚಿಕ್ಕಕವನಗಳಲ್ಲಿಯೇ ಪ್ರಕಟಗೊಂಡ ಅವರ ಜೀವನದರ್ಶನದ ಅಗಾಧತೆ ಮನವರಿಕೆಯಾದೀತು.

* ' ಮಾತು ಪರಸ್ಪರ ' ಹಾಗೂ ' ಜೀವ ' ಸಂಕಲನಗಳ ಕವಿ ಮಹಾಬಲ ಮೂರ್ತಿಕೊಡ್ಲೆಕೆರೆ. ಮಹಾಬಲಮೂರ್ತಿಯವರ ಜೀವನಪ್ರೀತಿ ಕವನಗಳ ಸಾಲು ಸಾಲುಗಳಲ್ಲಿ ಹೆಪ್ಪುಗಟ್ಟಿದೆ. ಬದುಕನ್ನು, ಬದುಕಿನ ಜೀವಂತಿಕೆಯನ್ನು ಮತ್ತು ಬದುಕಿನ ಜೀವಂತಿಕೆಗಾಗಿ ಮಾನವೀಯತೆಯನ್ನು ಹಂಬಲಿಸುವ ಈ ಕವಿ ಮನುಷ್ಯನ ಮತ್ತು ಮನುಷ್ಯನಾಚೆಗಿನ ಪ್ರಕೃತಿಯನ್ನು ಅಳೆದಿದ್ದಾರೆ. ಅಂತಃಕರಣಕ್ಕೆ ಮಿಡಿಸಿದ್ದಾರೆ. ವಿಕೃತಿಗಾಗಿ ಖೇದಪಟ್ಟಿದ್ದಾರೆ. ಮನುಷ್ಯ ಸಂಬಂಧದ ಗೆಲುವಿಗೆ ಕವನದ ಭಾವುಟವೆತ್ತಿದ್ದಾರೆ.

ಯಾಕೆಂದರೆ ನಾವು ಪರಸ್ಪರ/ಪ್ರೀತಿಸುವುದಿಲ್ಲ/ತುಸು/ಎಚ್ಚರ/ತಪ್ಪಿದರೂ ಪರಸ್ಪರ ಹೀರುತ್ತೇವೆ/ಕಬಳಿಸುತ್ತೇವೆ..... ( ಮಾತು ಮತ್ತು ಪರಸ್ಪರ )

ಚೆಲುವಿರುವುದು ವಸ್ತುವಿನಲ್ಲಲ್ಲ, ಅದನ್ನು ನೋಡುವ ಕಣ್ಣುಗಳಲ್ಲಿ. ನಮ್ಮ ಕಣ್ಣುಗಳಿಗೆ ಚೆಲುವನ್ನು ಗುರುತಿಸಲು ಕಲಿಸಿದವರು ನಾವೇ. ಮಹಾಬಲ ಮೂರ್ತಿಯವರ ಕಣ್ಣು ಎಲ್ಲೆಲ್ಲೂ ಚೆಲುವನ್ನೇ ಕಾಣುತ್ತದೆ. ಯಾಕೆಂದರೆ ಹೃದಯವಂತಿಕೆಯನ್ನು ಬಲ್ಲವರ ದೃಷ್ಟಿ ಅದು. ಆದ್ದರಿಂದಲೇ ಅವರ ಸೃಷ್ಟಿಯೂ ಹಾಗೆ.

ಸಿಡುಬು -ಕಲೆಗಳಿಂದ ಹೊಲಸಾದ/ಮುಖದವನೊಬ್ಬನ ಗಿಟಾರಿನಂತೆ/ ಸ್ವಾದಿಷ್ಟ ಸಂಗೀತ ರಸ ತುಂಬಿದ/ಗೀತಗಳಂತೆ ಕ್ಯಾಕ್ಟಸ್ಸಿಗೂ ಸಹಜ ( ಕ್ಯಾಕ್ಟಸ್ )

ಎರಡನೆಯ ಸಂಕಲನ ' ಜೀವ ' ಕ್ಕೆ ಮುನ್ನುಡಿ ಬರೆದ ಗೋಪಾಲಕೃಷ್ಣ ಅಡಿಗರು ಗುರುತಿಸಿರುವ ಹಾಗೆ ಮೂರ್ತಿಯವರಿಗೆ ಭಾಷೆಯ ಮೇಲೆ ಆ ಮೂಲಕ ಲಯದ ಮೇಲೆ ಹಿಡಿತವಿದೆ. ಆದರೆ ವೈವಿಧ್ಯ ಕಡಿಮೆ. ತುಂಬ ಪರಿಷ್ಕೃತ ಭಾಷೆಯನ್ನು ಅದರ ನಯನುಣುಪು ಅರಿತು ಬಳಸಬಲ್ಲರು. ಪುರಾಣ ಪ್ರತಿಮೆಗಳನ್ನು ದುಡಿಸಿಕೊಳ್ಳಬಲ್ಲರು. ಒಳಪ್ರಾಸಗಳ ಮೂಲಕ ಸೊಗಸು ಸಾಧಿಸುವ ಪ್ರಯತ್ನ ಒಂದಷ್ಟು ಕೃತಕವಾಗುವುದುಂಟು.

೧) ಕಚ ತೊರೆದ ದೇವಯಾನೀಯು ಸೊಲ್ಲ
೨) ಲಕ್ಷ್ಮಣನಗಲಿ ಬದುಕಿದ ಊರ್ವಿಳೆಯಂತೆಯೋ ಎಲ್ಲ
೩) ಉತ್ತರಾಯಣ ಭೀಷ್ಮಗೆ ಅಯ್ಯೋಪಾಪ
೪) ಕಲ್ಲಾಗಿ ಬಿದ್ದ ಅಹಲ್ಯೆಯೋ ಆಗಿಹೋಯ್ತಲ್ಲ ( ಕ್ರೋಟೋನ್ )

ಎಲ್ಲಿಯೋ ಇವೆ/ಇವಕ್ಕೆ ಭಾಷೆ/ಋತುಗಳ ಕ್ಲೀಷೆ/ಬಣ್ಣ–ನಿರ್ವಿಣ್ಣ/ಕಾವು–ಚಳಿ–ಮಳೆ–ಬೆಳೆ.... ( ಹೀಗೇಕೆಂದು ಕೇಳಬೇಡ )

ಆದರೂ ಸುಸಂಸ್ಕೃತ ಮನಸ್ಸೊಂದು ತನ್ನ ಸುತ್ತಲಿಗೆ ಕವನಗಳ ಮೂಲಕ ಅರಳಿಕೊಂಡ ಪರಿಯ ದಾಖಲೆಗಳು ಈ ಸಂಕಲನಗಳು.

* ಕುಮಾರ ಜೋಶಿ ಅವರ 'ಕವಿ ಮತ್ತು ಕರವಸ್ತ್ರ' ಸಂಕಲನದ ಮೂಲಕ ಜಿಲ್ಲೆಯ ಸಾಹಿತ್ಯಾಸಕ್ತರ ಗಮನವನ್ನು ತಮ್ಮತ್ತ ಸೆಳೆದುಕೊಂಡಿದ್ದಾರೆ. ಎಲ್ಲವನ್ನು ಸ್ವಂತದ ಅನುಭವದ ನಿಜದಲ್ಲಿ ಕಾಸಿ,ಸೋಸಿ,ಒರೆಗೆ ತಿಕ್ಕಿನೋಡುವ ಜೋಶಿ ನಗರದ ಬದುಕಿನ ಜೊಳ್ಳುತನವನ್ನು ಪರಿಚಯಿಸುವಂತೆ ಬದುಕಿಗೆ ದಕ್ಕಿದ ಎಲ್ಲ ಅನುಭವಗಳನ್ನು ನಿಷ್ಠುರವಾಗಿ ಅಳೆಯಬಲ್ಲರು, ಬೆಲೆಕಟ್ಟಬಲ್ಲರು. ಸೂಕ್ಷ್ಮವಾಗಿ ಎಲ್ಲವನ್ನುಗಮನಿಸುವ, ಗ್ರಹಿಸುವ, ಶಕ್ತಿಯಿರುವ ಜೋಶಿ ಅವುಗಳನ್ನು ಅಷ್ಟೇ ನವುರಾದ ಭಾಷೆಯಲ್ಲಿ ಹಿಡಿದಿಡಬಲ್ಲರು. ವಾಚಾಳಿತನದ ಅಂಚಿನವರೆಗೆ ಹೋದರೂ ಅದರಿಂದ ತಪ್ಪಿಸಿಕೊಂಡು, ಸರಳವೆನಿಸಿದರೂ ಅರಳರಳಿದಂತೆ ಉಲ್ಲಾಸದಾಯಕ ಪದಪುಂಜಗಳನ್ನು ಹೆಕ್ಕಿ ಪವಣಿಸಬಲ್ಲರು.

ಲಂಬಾಣಿ ಹುಡುಗಿಯ ಲಂಗದಿಂದುದುರುವ/ಕನ್ನಡಿಯಂತೆ
ಹೊತ್ತುಬೀಳುತ್ತಿದೆ/ಹೆಕ್ಕುವರಿಲ್ಲ/ಹಸಿಮಣ್ಣು/ಹಳಿಕಣ್ಣು/ಬಿಳಿ ಅಣಬೆ ಹೂವೆಂದು ಮುಡಿಯುವವರಿಲ್ಲ/ಚಂದ್ರ ಆಡುವ ಅಂಗಳದಂಚು/ ರಾತ್ರಿರಾಣಿಯ ಬೇಲಿ/ತಂಪೆಂದು ಹಾಸಿ ಮಲಗುವವರಿಲ್ಲ.... ( ಎಳೆ ಸುಳಿಯ ಮೊದಲ ಪಾಠ )

ಅನುಭವಗಳ ಸಂಕೀರ್ಣತೆಗಿಂತ ಒಂದು ಅನುಭವವನ್ನು ಹಿಂಜಿ–ಹಿಂಗಿಸಿ ನೋಡುತ್ತ ಅದರ ವಿವರ ವಿವರಗಳನ್ನು ಕಲಾತ್ಮಕ ಸ್ಪರ್ಶಕ್ಕೆ ಒಳಪಡಿಸುವ ಪ್ರಯತ್ನಗಳು ಹೆಚ್ಚಿನ ಕವನಗಳಲ್ಲಿವೆ. 'ಸೂಚನೆ' 'ಜಾತ್ರೆ ತಂದರೆ,' ಕಂತುಗಳ ಬದುಕಿನಲ್ಲಿ ನೀವಾದರೂ ಮುಂತಾದ ಕವನಗಳನ್ನು ಈ ಕುರಿತು ನೋಡಬಹುದು. ಮುಂಬಯಿಯಲ್ಲಿ ಬರೆದದ್ದು 'ಉತ್ಸವ ಮೂರ್ತಿಗೆ' ಅಣ್ವಸ್ತ್ರ ಮತ್ತು ಮಖಮಲ್ ಟೋಪಿ, ಬಗೆಯ ಕವನಗಳು ಬರಿಯ ವಿವರಗಳಲ್ಲಿ ತೃಪ್ತವಾಗದೆ ಮಹತ್ವದನ್ನು ಧ್ವನಿಸುವ ಪ್ರಯತ್ನ ಮಾಡಿವೆ.

ಇಷ್ಟೇ-ಬದುಕು-ಇದೇ/ಇಲ್ಲಿ ಪ್ರೀತಿ ಕೊಂಡುಕೊಳ್ಳುವ ವಸ್ತುವಾಗಿದ್ದರೆ/ ಅದು ಸಿಗುವ ದುಕಾನು/ಲೂಟಿಯಾಗಿ ಹೋಗುತ್ತಿತ್ತು.(ಮುಂಬೈಯಲ್ಲಿ ಬರೆದದ್ದು)

'ಬಾ, ಬರುವೆಯಾ' 'ಇಲ್ಲದ ಸೇತುವೆ ಕುರಿತು,' 'ಇಪ್ಪತ್ತೆಂಟರಲ್ಲಿ' ಕವನಗಳ ಲವಲವಿಕೆ-ಭಾಷೆಯ ನವುರು, ಕುಸುರಿ ಭಿನ್ನಶೈಲಿ ಮತ್ತು ಆಶಯದ 'ಒಡೇರಲ್ಲಿ ಒಂದು ಮಾತು' ಕಾವ್ಯಕ್ರಿಯೆಯನ್ನು ಬಗೆದುನೋಡುವ 'ಕವಿತೆಗಳು ಮತ್ತು ಕವಿತೆ,' 'ಕವಿ ಮತ್ತು ಕರವಸ್ತ್ರ' ಕವನಗಳು ಗಮನಾರ್ಹವಾಗಿವೆ. ಜೊತೆಗೆ 'ಸಂಬಂಧ ಪದ್ಯಗಳು' 'ವಿರಹ' ದಂತಹ ಪ್ರಯೋಗಶೀಲ ಕವನಗಳು ಸಂಕಲನದಲ್ಲಿವೆ.

ಜೋಶಿ ಸೂಕ್ಷ್ಮ ಸಂವೇದನಶೀಲ ಕವಿ. 'ಕವನವೆಂದರೆ ಒರಿದೆ ಬರೆದು ಚೆಲ್ಲುವುದಲ್ಲ' ಎಂಬ ಅರಿವು ಜೊತೆಗೆ 'ಉಳಿವ ಹಾಗೆ ಆಳದವರೆಗೆ ಇಳಿವ ಹಾಗೆ/ಹೇಳುವುದು/ಹೇಗೆ ಎಂಬ ಸವಾಲು ಆವರಿಸಿದೆ. ಯಾಕೆಂದರೆ ಕಾವ್ಯ 'ಶಬ್ದಗಳಿಗೆ ಜೀವಕೊಟ್ಟು ಧ್ವನಿಕೊಟ್ಟು/ಕಾಡುವಂತೆ ಕಾಗದದ ಮೇಲೆ ಮಾತಾಡುವುದು' ಎಂಬುದೂ ಅವರಿಗೆ ಗೊತ್ತು. ಆಳದಲ್ಲೆಲ್ಲೋ ತಟ್ಟಿದ ಅನುಭವಗಳು ಮೌನದಲ್ಲಿ ಕಾವುಕೂತು ಶಬ್ದಗಳಾಗಿ ಬಿರಿಯುವ ಕ್ಷಣಗಳ ವೇದನೆಯ ನಿವೇದನೆಯ ಕಷ್ಟವನ್ನು ಎದುರಿಸಿ ಜೋಶಿ ಗೆದ್ದಿದ್ದಾರೆಂದು ಅವರ ಈ ಸಂಕಲನವೇ ಸಾಕ್ಷಿ. ಕಾಡುವ ಭಾವನೆಗಳು ಹಾಗೂ ಅದರಂಚಿನ ಚಿಂತನೆಗಳು ಅವರ ಕವನಗಳಲ್ಲಿ ಮಿಂಚುತ್ತ, ಭಾವುಕವೆನಿಸದಂತೆ ಆರ್ದ್ರಗೊಳಿಸಬಲ್ಲವು. ಕೆಲವು ಒಳ್ಳೆಯ ಮಿನಿಗವನಗಳು ಇಲ್ಲಿವೆ.

* 'ಈ ಜಗತ್ತು' ಚಿಂತಾಮಣಿ ಕೊಡ್ಲೆಕೆರೆಯವರ ಮೊದಲ ಸಂಕಲನ. ಹಿರಿಯ ವಿಮರ್ಶಕ ಗೌರೀಶ್ ಕಾಯ್ಕಿಣಿ 'ಶುಭಾಶಯ' ಬರೆಯುತ್ತ ಈ ಕವಿಯ ನೇರ ನಿರಾಡಂಬರ ಶೈಲಿಯನ್ನು, ಚಿಂತನಶೀಲತೆಯನ್ನು ಗುರುತಿಸಿದ್ದಾರೆ. ಗದ್ಯಕ್ಕೆ ಹತ್ತಿರವಾದ ಹೆಣಿಕೆಯಲ್ಲಿ ಪ್ರಬುದ್ಧ ಆಲೋಚನೆಗಳನ್ನು ಹೊಂದಿಸುವ ಪ್ರಯತ್ನ ಚಿಂತಾಮಣಿಯವರ ಕವನಗಳಲ್ಲಿವೆ. ಆದರೆ ಹಾಗೆ ಚಿಂತನೆಗಳನ್ನು ಮುಂದಿಡುವ ರೀತಿ ಅವರದೇ. ಬಗೆಬಗೆಯಲ್ಲಿ ವಿಷಯವನ್ನು ಮಥಿಸುತ್ತ, ಅನುಭವವನ್ನು ತರ್ಕಕ್ಕೆ ಒಡ್ಡುತ್ತ ಕೊನೆಗೊಂದು ನಿರ್ಣಯದ ನಿಲುವಿಗೆ ಬರುವುದು ಅವರ ಬಹುತೇಕ ಕವನಗಳ ರೀತಿ. ಉದಾಹರಣೆಗೆ ಮಣ್ಣು ಕವನದಲ್ಲಿ ಜೀವಾಜೀವ ಜಗತ್ತಿನ ಸಕಲವೂ ಮಣ್ಣಿನ ಜೊತೆ ಪಡೆದುಕೊಳ್ಳುವ ಸಂಬಂಧವನ್ನು ವಿವಿಧ ಮಗ್ಗುಲಿನಿಂದ ಶೋಧಿಸುತ್ತ ಕೊನೆಯಲ್ಲಿ ತಾಳುವ ನಿಲುವು ಉಲ್ಲೇಖಾರ್ಹ.

ಬಜಾರಿನ ತರಕಾರಿ/ಬಜಾರಿನ ಚಿನ್ನಾಭರಣ/ಈ ಪ್ರಯೋಗಾಲಯದ ಗಾಜಿನುಪಕರಣ/ಜೊತೆಯಲ್ಲಿ ನಾನು.ನೀವೂ/ಮಾನವ ಕುಲದ/ಇತಿಹಾಸದಶ್ವತ್ಥ ಮರದಡಿಗೆ/ಮಣ್ಣಲ್ಲಿ ಮಣ್ಣಾಗಿ ಕರಗುವ ಕತೆಯೋ ಇಂದಿನ ಉಸಿರು ...

ಎಲ್ಲ ಬೇಲಿ–ಗೋಡೆ–ಪರದೆಗಳ ಜೊತೆಗಿನ ವಿಶ್ವಕ್ಕೆ ತೆರೆದುಕೊಳ್ಳಬೇಕಾದ ಮುಕ್ತ ಮನಸ್ಸಿಗೆ ಅಹ್ವಾನವೀಯುವ ಕವಿಯ ಮಾನವೀಯ ದೃಷ್ಟಿ 'ಬಾಗಿಲುತೆಗೆ' ಕವನದಲ್ಲಿ ಆತ್ಮೀಯಧಾಟಿಯಲ್ಲಿ ಅರಳಿಕೊಂಡಿದೆ. ಹಗುರಾದ ಲೇವಡಿ–ವ್ಯಂಗ್ಯದ ಮೊನಚು ಚಿಂತಾಮಣಿಯವರ ಲೇಖನಿಗೆ ಸಿದ್ಧಿಸಿದೆ.' ಗೆಂಡೆ ತಿಮ್ಮ ವಿವಾಹ' 'ಎಲ್ಲವೂ ದೇವರ ಲೀಲೆ' 'ಯಾಕೆ–ಯಾಕೆಂದರೆ' ಮುಂತಾದ ಕವನಗಳನ್ನು ಈ ಕುರಿತು ಗಮನಿಸಬಹುದು.

ಅವನು ಭಗವಂತ/ನನ್ನ ಕೈ ಹಿಡಿತಕ್ಕೆ ಸಿಗಲೇಬಾರದು ಅಂತ/ಇದ್ದನೆಂದು ತೋರುತ್ತದೆ/ಇವತ್ತು ಸಿಕ್ಕೇಬಿಟ್ಟ/ಹಾಗೆಂದು ನನ್ನದೇನಿದೆ ಇದರಲ್ಲಿ/ಎಲ್ಲವೂ ದೇವರ ಆಟ/ನನ್ನದೇನಿದ್ದರೂ/ಒಂದು/ಎರಡು ಊಟ.

ಭಾಷೆಯ ಹೊಳಪು–ಕೋಮಲತೆಗಿಂತ ಹೇಳಬೇಕಾದ ಸಂಗತಿಯ ತೀಕ್ಷ್ಣತೆ ಈ ಕವಿಗೆ ಮುಖ್ಯವಾದರೂ ಭಾಷೆಯ ಸರಳ ಸಿಂಗಾರದಲ್ಲಿಯೇ ಆಕರ್ಷಣೆಯಿದೆ ಯೆಂಬುದು ಇಲ್ಲಿ ಮುಖ್ಯ. ಉದಾಹರಣೆಗೆ ತಾತ್ವಿಕ ಸಂಗಾತಿಯನ್ನು ವಾಚ್ಯವಾಗಿ ಪ್ರಕಟಿಸುವ 'ನಾಯಿಗಳಿವೆ' ಕೂಡ ಭಾಷೆಯ ಚುರುಕುತನದಿಂದಲೇ ಖುಷಿ ಕೊಡುತ್ತದೆ.

* ಜಯಂತ್ ಕಾಯ್ಕಿಣಿ ಅನುಭವ ಮತ್ತು ಅಭಿವ್ಯಕ್ತಿಗಳೆರಡಕ್ಕೂ ಸಮಾನ ಮಹತ್ವವನ್ನು ಕೊಡುವ ಕವಿ. ಒಂದು ಕಾವ್ಯ ರೂಪುಗೊಳ್ಳುವ ಅನನ್ಯತೆಯಲ್ಲಿಯೇ ಅನುಭವವನ್ನು ಇಡಿಯಾಗಿ ಕಟ್ಟಿಕೊಡುವ ಸಾಮರ್ಥ್ಯವನ್ನು ಪಡೆಯುತ್ತದೆಂಬುದು ಅವರಿಗೆ ಗೊತ್ತು. 'ರಂಗದಿಂದೊಂದಿಷ್ಟುದೂರ'ದ ಮೂಲಕ ತಮ್ಮ ಕಸುಬುಗಾರಿಕೆಯನ್ನು ಸಾಬೀತುಪಡಿಸಿದ ಜಯಂತರು 'ಕೋಟಿ ತೀರ್ಥ' ಹಾಗೂ 'ಶ್ರಾವಣ ಮಧ್ಯಾಹ್ನ' ಗಳಲ್ಲಿ ಮತ್ತಷ್ಟು ಪಳಗಿದ್ದಾರೆ. ಸಂವೇದನಶೀಲ ಮನಸ್ಸೊಂದು ಅನುಭವದ ವಿವರಗಳನ್ನು ಸೂಕ್ಷ್ಮವಾಗಿ ಗ್ರಹಿಸುವ ಪರಿ, ಅಂಥ ವಿವರಗಳೆಲ್ಲ ವರದಿಯಾಗದಂತೆ, ಒಂದು ಆಲೋಚನೆಯ ಬಲಿಷ್ಠ ಮಂಡನೆಗೆ ನೆರವಾಗುವಂತೆ ಬಳಸಿಕೊಳ್ಳುವ ರೀತಿ, ಮಾತುಗಳೆಲ್ಲ ಬರಿ ಚಮತ್ಕಾರವಾಗದಂತೆ ಸರಳ ಆಡುನುಡಿಗಳ ಸಲೀಲ ಹೊಂದಾಣಿಕೆಯ ಮೂಲಕ ಆಕಾರ ಆಳೆಯುವ ವಿಧಾನ, ಗದ್ಯಲಯದ ನವುರು–ನಾಜೂಕುಗಳ ನಿರಾಯಾಸ ದುಡಿತ, ಒಮ್ಮೆ ನೇರವಾಗಿ–ಇನ್ನೊಮ್ಮೆ ಪ್ರತಿಮೆಗಳ ಮೂಲಕ ಬಯಲಿಗಿಟ್ಟರೂ ಕೃತಕವೋ ಕಸರತ್ತೋ ಎನಿಸದ ಶೈಲಿ, ತೀರ ಸಾಮಾನ್ಯವೆನಿಸುವ ಸಂಗತಿಯಲ್ಲಿ ಗಂಭೀರ ಆಲೋಚನೆಗಳನ್ನು ಹಿಡಿಯಬಲ್ಲ ಚಾಲಾಕು. ಒಮ್ಮೆ ವಿನೋದವಾಗಿ–ಇನ್ನೊಮ್ಮೆ ವ್ಯಂಗವಾಗಿ–ಮತ್ತೊಮ್ಮೆ ಸೀರಿಯಸ್ಸಾಗಿ–ಛಂದೋಬದ್ಧವಾಗಿ ಮುಕ್ತವಾಗಿ ಬರೆಯುತ್ತ ಮಾಡುವ ಪ್ರಯೋಗಗಳ ನಡುವೆ ಚಿಮ್ಮುವ ಮಾನವೀಯ ಕಳಕಳಿ–ಕಾಯ್ಕಿಣಿಯವರ ಕವನಗಳಲ್ಲಿ ಕಾಣುವ ಗುಣ.

ಒಂದೆರಡು ಸ್ಯಾಂಪಲ್ಲು ಗಮನಿಸಬಹುದು.

ಬರಗಾಲ ಇಲ್ಲಿಲ್ಲ/ಪ್ರತಿವಾರ ಜನಿವಾರಗಳ ತುಂಬ/ರಾಶಿ ರಾಶಿ ಗಂಟೆಗಳ/ಗಂಟೆಗೊಮ್ಮೆ ಗಂಟೆಗೊಂದು ಬ್ರಹ್ಮಾವತಾರ/ಹೋಮ ಹವನದ್ದೇ ಮೋಡ/ದೇಶಕ್ಕೆ ಬಾರದ ಉಪದೇಶಗಳದ್ದೇ ಮಳೆ/ಎಲ್ಲರೂ ತೊಳಕೊಂಡು ನೆಲದಲ್ಲಿಂಗಿದ/ಪಾಪದ್ದೇ ಬೆಳೆ. ( ಕೋಟಿತೀರ್ಥ ) ಈ ಪುಟ್ಟ ಪುಟ್ಟ ತೊಡೆ ಬೆರಳು, ಸೌತೆ ಕೈಕಾಲು/ಬೆಳೆದು ಬಿರುಸಾಗಿ ಈ ಜೀವರಸ/ಚಿಮ್ಮುವ ಗಲ್ಲಗಳು ಒಣಗಿ ಗೆರೆ ಸುಕ್ಕು ಮೂಡಿ/ಧೀರ ಗಂಭೀರ ಮೀಸೆ ಗಡ್ಡಾದಿಗಳ/ಎಂಥೆಂಥದೋ ಕಳೆಗಳ ಒಡೆಯರಾಗಿ/ಅಪ್ಪಂದಿರಾಗಿ ಥೇಟು ಅಪ್ಪಂತರಾಗಿ/ವಸ್ತುಗೆ ಮೀರಿದ ಭಾವ ಹೊತ್ತು ಮೆರೆಯಲಿದ್ದೀರಿ/ಆ ನಿಮ್ಮ ಘೋರ ಕವಿಸಮಯವನ್ನು ಊಹಿಸಲಾರೆ. ( ಮುದ್ದು ಮಕ್ಕಳಿಗೊಂದು ಕವಿತೆ. )

* ಜಿನದೇವ ನಾಯಕರು ಜಿಲ್ಲೆಯ ಸಾಹಿತ್ಯಕ ವಲಯದಲ್ಲಿ ಪ್ರಸಿದ್ದರಾಗಿದ್ದವರು. ಸಹೃದಯ ವಿಮರ್ಶಕರಾಗಿ ಎಂತೋ ಅಂತೇ ತಮ್ಮ ಸಜ್ಜನಿಕೆಗೂ ಹೆಸರಾಗಿದ್ದವರು. 'ಕೌರವರೂ ಪಾಂಡವರೂ ಕ್ಷೇಮದಿಂದಿರುವರೇ' ಕವನ ಸಂಕಲನ ಅವರ ಆರ್ಭಟವಿಲ್ಲದ-ರಭಸವಿಲ್ಲದ ಸರಾಗ ಬರವಣಿಗೆಗೆ ಸಾಕ್ಷಿ. ಪರಿಚಯವೂ ಅಕ್ಲಿಷ್ಟವೂ ಆದ ಶಬ್ದಗಳ ಆಯ್ಕೆ, ಸಂಸ್ಕೃತ ಪದ ಬಾಹುಲ್ಯವಾಗಲಿ ಒತ್ತಕ್ಷರಗಳಾಗಲಿ ಇಲ್ಲದ ಸುಲಲಿತ ಕಾವ್ಯಶೈಲಿ ಇವರದು. ಪ್ರಯತ್ನಪೂರ್ವಕ ಸಿಂಗರಿಸಿದ ಅಲಂಕಾರವಾಗಲಿ ಬೆಡಗಾಗಲಿ ಇಲ್ಲದ ಅವರ ಕಾವ್ಯಕ್ಕೆ ಆಪ್ತ ಸಂವಾದದ ಸ್ಪರ್ಶವಿದೆ. ವಿದ್ರೋಹದ ಒಳಧ್ವನಿಯುಕ್ಕಿಸುವ ಕವನಗಳಲ್ಲಿಯೂ ಆವೇಶವಿಲ್ಲ. 'ಜೂನ್ ತಿಂಗಳಲ್ಲಿ ಶರಾವತಿ' 'ಬೊಂಬಾಯಿ' 'ಬಾಬರ' 'ಇಪ್ಪತ್ತು ಮೂಳೆಗಳು' 'ಕೌರವರೂ ಪಾಂಡವರೂ ಕ್ಷೇಮದಿಂದಿರುವರೇ' ಮುಂತಾದ ಒಳ್ಳೆಯ ಕವನಗಳು ಈ ಸಂಕಲನದಲ್ಲಿವೆ.

ಕಾವ್ಯರೀತಿಗೆ ಮಾದರಿ : ಕಾಲಪಕ್ಷಿಯ ರೆಕ್ಕೆ ಮುರಿದರೂ/ಊರಿನ ನಕ್ಷೆ ಬದಲಾಗಿಲ್ಲ/ಎಲ್ಲೋ ರೈಲು ಓಡಿದ ಸದ್ದು/ಪುಪ್ಪುಸಕೆ ಕಸಿ ( ಊರು )

ಶ್ರೀ ವಿಷ್ಣುನಾಯ್ಕರು ಹೇಳುವ ಹಾಗೆ-"ಅವರ ಕಾವ್ಯ ಅವರ ಸೂಕ್ಷ್ಮ ಸಂವೇದನ ಶೀಲ ಮನಸ್ಸಿನ ಪ್ರತೀಕ. ಅವರ ವೈಯಕ್ತಿಕ ಒಲವು-ನಿಲುವುಗಳ ದಿಕ್ಸೂಚಿ" ಎಂಬುದು ನಿಜ.

* ಸುಂದರ ನಾಡಕರ್ಣಿ ಕಾದಂಬರಿಯ ಮೂಲಕ ಪರಿಚಿತ ಹೆಸರು. ಅರ್ಥಡಜನು ಕಾವ್ಯ ಸಂಕಲನಗಳನ್ನು ನೀಡಿದ ಗಮನಾರ್ಹ ಕವಿಯೂ ಹೌದು. ತೊಂಬತ್ತರ ದಶಕದಲ್ಲಿಯೇ ಅವರ ನಾಲ್ಕು ಸಂಕಲನಗಳು-'ಅಂತರದ ನೀರು ನೆಗಸು 'ಉಸಿರುಗಳ ಬೀದಿಯು' 'ತುಂಡು ಬಯಲು ತುಂಡು ಆಕಾಶ' ಹೊರಬಂದಿವೆ.

ಸುಂದರ ನಾಡಕರ್ಣಿ ಅನುಭವಗಳಿಗೆ ಶಬ್ದಗಳಲ್ಲಿ ಜೀವತುಂಬಬಲ್ಲರು. ಸೂಕ್ಷ್ಮ ವಿವರಗಳನ್ನು ಎಳೆಯಾಗಿ ಹೆಣೆಯಬಲ್ಲರು. ಅನುಭವ ತಾತ್ವಿಕತೆಗಳನ್ನು ಶಬ್ದಗಳಾಗಿ

ಪರಿವರ್ತಿಸುವಾಗಿನ ಸೋಲು–ಗೆಲುವುಗಳನ್ನು ಅಳೆಯಬಲ್ಲರು. ಕಾವ್ಯಲೋಕದ ಈ/ ಶಬ್ದಸುಪ್ರಸೂತಿಗೆಯು/ಶಬ್ದ ಸಮಾಗಮ ಇಲ್ಲ/ಕಾವ್ಯ ಶಿಶುವಿನ ಸುರುಳೀತ/ಹೆರಿಗೆ ಯಾಗದಿದ್ದರೂ/ಒಮ್ಮೊಮ್ಮೆ/ಅದು ಕೇವಲ ಶಬ್ದಸ್ಖಲನ/ಗರ್ಭಪಾತ, ಅಷ್ಟಹೆರಿಗೆಯು ಒಡ್ಡೋಲಗವಾಗುವುದುಂಟು. ( ಶಬ್ದಗಾರುಡಿ )

ಪ್ರತಿಮಾವಿಧಾನದಲ್ಲಿ ಹಿಡಿತವಿರುವ ಸುಂದರರಿಗೆ ಲಯದ ಮೇಲೆ ಗಟ್ಟಿ ಒಡೆತನವಿದೆ. ಗೇಯುಲಯದ, ನಿಯತಲಯದ ಕವನ ಅಥವಾ ಕವನ ಭಾಗಗಳು ಅವರ ಸಾಮರ್ಥ್ಯದ ಮತ್ತೊಂದು ಮಗ್ಗುಲ ಮೇಲೆ ಬೆಳಕು ಚೆಲ್ಲುತ್ತವೆ. ಭಾವಗೀತೆ ಹತ್ತಿರವಾದ ನಿಯತಲಯದ ಇಂಥ ಭಾಗಗಳು ಬಹುತೇಕ ಕವನಗಳ ಪ್ರಾರಂಭದಲ್ಲಿ ಇಲ್ಲವೇ ಅಲ್ಲಲ್ಲಿ ಗೋಚರಿಸುತ್ತವೆ. ನಾನೆ ಅರಿಯದ ಹಾಗೆ ನನ್ನೆದೆಯ ಈ ಬಯಲು/ಒಮ್ಮೆಲೇ ಹಸಿರಾಗಿ ಹೂ ಬಿಟ್ಟಿದೆ/ಅವ್ಯಕ್ತ ಭಾವಗಳ ಪುಟಿದ ಕಾರಂಜಿ/ ತಳೆದು ನಿಂತಿದೆ ನಿನ್ನ ಸಪ್ತವರ್ಣ.

ನಾಡಕರ್ಣಿಯವರ ಸಂಕಲನಗಳ ರಾಚನಿಕ ಪರಿಶೀಲನೆಯಿಂದ ಅವರ ಪ್ರಯೋಗಶೀಲತೆ ಗಮನಕ್ಕೆ ಬರುತ್ತದೆ. ಹೊಸ ಸಾಧ್ಯತೆಗಳ ಶೋಧ ಹಾಗೂ ದುಡಿಮೆಗಳಿಂದ ಅವರ ಬೆಳವಣಿಗೆಯ ಹಂತಗಳು ಎದ್ದು ತೋರುತ್ತವೆ. 'ಅಂತರದ ನೀರು ನೆಗಸು' ಸಂಕಲನದ ಹೆಚ್ಚಿನ ಕವನಗಳು ಏಕಮಾದರಿಯವು. ತುಂಡು ಬಯಲು ತುಂಡು ಆಕಾಶದಲ್ಲಿ ವಸ್ತು ವೈವಿಧ್ಯದೊಂದಿಗೆ ಶಿಲ್ಪದಲ್ಲಿ ಹೊಸತನವಿದೆ, ಸೊಗಸಿದೆ 'ವಣಪೆಯಲ್ಲಿ ನಿಂತು' ಸಂಕಲನದಲ್ಲಿ ಪ್ರಾದೇಶಿಕತೆಯ ಛಾಪು ಜಾನಪದ ಕಸುವು ಇದೆ. ಜೀವ ತಳೆವ ಆವರಣ, ಬಣ್ಣಗಾರಿಕೆಯಲ್ಲಿನ ಸಹಜ ಚೆಲುವು ಅವರ ಕಾವ್ಯದ ಸಹಜ ಗುಣ.

ಬಾನೆ ಕಂಬಳಿ ಹೊದ್ದು ಹೊಡೆವ ಗೊರಕೆಯ ಸದ್ದು/ಊರ ಕಿವುಡರಿಗೆಲ್ಲ ಕಿವಿಯು ತಂತು/ಬೆಳಕಿಗಾಯಿತು ಭಟ್ಟರುಡುವ ಪಂಚೆಯ ಬಣ್ಣ/ಇಡಿಯ ಹಗಲಿಗೆ ಮತ್ತೆ ಹುಬ್ಬುಗಂಟು/ಉದ್ದ ಕಚ್ಚೆಯರೆಲ್ಲ ಕಟ್ಟೆಯಂಗಡಿ ಹತ್ತಿ/ಹಾಳು ಹರಟೆಯ ಕರೆದು ಔತಣವನ್ನಿತ್ತಾಗ/ಬಂತು ಬಂದೇ ಬಂತು ನಮ್ಮ ಊರಿಗೆ ಮಳೆಯು/ಬಾಯಿ ಸವಿಗಾಗಿದ್ದ ಬೆಲ್ಲದಂತೆ ( ನಮ್ಮೂರಿಗೆ ಮಳೆ ಬಂತು )

ಈ ಸುಂದರ ಚಿತ್ರ ನೋಡಿ : ೧) ನಮ್ಮೂರ ಬೆಳಗು/ ನಿದ್ದೆ ತಿಳಿದೆದ್ದ ಕೂಸಿನ ಆಕಳಿಕೆ. ೨) ನಮ್ಮೂರ ಅಪರಾಹ್ನ/ಬಂಜೆ ಗರತಿಯ ಒಡಲಾಳದ ಕನವರಿಕೆ ೩) ನಮ್ಮೂರ ಸಂಜೆ/ಬಾಲ ವಿಧವೆಯ ಸೆರಗು ಮುಪ್ಪಾಗಿ ಅತ್ತಂತೆ.

'ದಣಪೆಯಲ್ಲಿ ನಿಂತು' ನಾಡಕರ್ಣಿಯವರ ದುರ್ಬೀನು ದೃಷ್ಟಿ ಹೀರಿಕೊಂಡ ಸುಂದರ ಸೃಷ್ಟಿ. ದಣಪೆಯಲ್ಲಿಣುಕಿದ ಕೂಕಿ ನೋಟಕ್ಕೆ ದಕ್ಕಿದ ದೃಶ್ಯ ಸಾದೃಶ್ಯಗಳು ಅಷ್ಟೇ ಬೆರಗುಬರಿಸುವಂತಿವೆ.

* ಹನ್ನೊಂದು ಸಂಕಲನಗಳನ್ನು ಆಗಲೇ ಕೊಟ್ಟಿರುವ ನಾರಾಯಣ ತೊರ್ಕೆಯವರು 'ಸೇವೆ' ಸಂಕಲನದ ಮೂಲಕ ಡಜನು ಕೃತಿಗಳನ್ನು ಕೊಟ್ಟಂತಾಗಿದೆ. ಮುನ್ನುಡಿ ಬರೆದ ರಾಮಕೃಷ್ಣಗುಂದಿ ಹೇಳುವ ಹಾಗೆ ತೊರ್ಕೆಯವರಿಗೆ ಕವಿಯಾಗುವ ಹಂಬಲಕ್ಕಿಂತ ಕಂಡುದನ್ನು ಬೇರೆಯವರಿಗೆ ಹೇಳಲೇಬೇಕೆಂದು ಹಂಬಲವೇ ಹೆಚ್ಚಾಗಿರುವಂತಿದೆ. ಜೀವನದ ಬೇಕು-ಬೇಡಗಳನ್ನು ಸರಿ-ತಪ್ಪುಗಳನ್ನು ವಿವೇಚಿಸುತ್ತಾ ಅಭಿಪ್ರಾಯ ಮಂಡಿಸುತ್ತಾ ಹೋಗುವ ಈ ಕವನಗಳಲ್ಲಿ ಸುತ್ತಲಿನ ಸಮಾಜ 'ಹೇಗಿದೆ' ಎಂಬುದಕ್ಕಿಂತ 'ಹೇಗಿರಬೇಕು' ಎಂಬ ಆದರ್ಶದ ಕಾಳಜಿಯೇ ಮುಖ್ಯವಾಗಿದೆ. ಆದ್ದರಿಂದ ಬೋಧಗೀತೆಗಳು, ಪರಿಸರ ಗೀತೆಗಳು, ಸಮೂಹ ಗೀತೆಗಳು ಹೆಚ್ಚಾಗಿ ಇವೆ. ಮಕ್ಕಳು ಹಾಡಿ ನಲಿಯಬಹುದಾದ ಸರಳ ಗೀತೆಗಳು ಇವೆ. ಕೆರೆ ಬಾವಿಗಳ ನೀರನ್ನು ಕೊಟ್ಟು/ಉತ್ತಮ ಗಿಡ-ಮರ ಬೆಳೆಸೋಣ/ ಕೊಟ್ಟಿಗೆ ತುಂಬಾ ದನಕರು ಕಟ್ಟಿ/ಹಾಲು ಮೊಸರು ದಿನ ಸವಿಯೋಣ.

ಸಹನೆ, ಅಸೂಯೆ, ಸತ್ಯ-ಅಸತ್ಯ, ಅತಿ-ಮಿತಿ, ಉದ್ಯೋಗಿ-ನಿರುದ್ಯೋಗಿ, ಧ್ಯೇಯ ಸೇವೆ-ಮುಂತಾದ ಸಂಗತಿಗಳ ಬಗ್ಗೆ ಆದರ್ಶಗಳ ಬಗ್ಗೆ ಮೌಲ್ಯಗಳ ಬಗ್ಗೆ ಈ ಸಂಕಲನದಲ್ಲಿ ಕವನಗಳಿವೆ.

* ಸಾಮಾಜಿಕ ಬದಲಾವಣೆಯ ಹರಿಕಾರರಾಗಿ, ಆರ್ಥಿಕ ವಿಕಾಸದ-ಶೈಕ್ಷಣಿಕ ಮುನ್ನಡೆಯ ಪ್ರೇರಕರಾಗಿ ದುಡಿದು ಜಿಲ್ಲೆಯ ಓಟವನ್ನು ತೀವ್ರಗೊಳಿಸಿದ ವ್ಯಕ್ತಿ ದಿನಕರದೇಸಾಯಿ. ಅವರ ಸಾಹಿತ್ಯ ಅವರ ಮನೋಧರ್ಮಕ್ಕೆ ಹಿಡಿದ ಕನ್ನಡಿ 'ದಾಸಾಳ' ದೇಸಾಯಿಯವರ ಕೊನೆಯ ಸಂಕಲನ. ಅವರ ಕಾವ್ಯೋದ್ಯೋಗ ಬದುಕಿನಲ್ಲಿಯೇ ಬೇರು ಪಡೆದದ್ದು. ಪ್ರಚಾರಕ್ಕೆ ಪ್ರಸಿದ್ಧಿಗೆ ಎಂದು ಕವನ ಬರೆದವರಲ್ಲ ಅವರು. ಸಾಮಾನ್ಯರ ಜೀವನದ ಜೊತೆ ಸಂಬಂಧ ಸ್ಥಾಪಿಸಿಕೊಂಡ ಅವರ ಕಾವ್ಯ ಸಾಹಿತ್ಯವು ಆಡಂಬರ-ಗತ್ತು-ಕಸರತ್ತುಗಳಿಂದ ದೂರ ನಿಂತದ್ದು ಅಸಹಜವೇನಲ್ಲ. ಅವರ ಕವನಗಳಿಗೆ ಮಲ್ಲಿಗೆಯಂತೆ ಕಂಪಿಲ್ಲ, ದಾಸಾಳದಂತೆ ಅವೆಲ್ಲ ನಿರ್ಗಂಧ ಕುಸುಮ,

ದೇಸಾಯಿಯವರ ದೃಷ್ಟಿಯಲ್ಲಿ ಕಾವ್ಯ ಉಳಿಯಬೇಕಾದ್ದು ಸತ್ವದಿಂದ. ಸೌಂದರ್ಯದಿಂದಲ್ಲ. ವಿಚಾರಗಳ ಪರಿಣಾಮ-ಪ್ರಯೋಜನ ಮುಖ್ಯ, ಅಲಂಕಾರವಲ್ಲ. ಹಾಗೆಂದು ದೇಸಾಯರ ಕವನಗಳು ಶುಷ್ಕವಲ್ಲ. ಅವುಗಳಲ್ಲಿ ಸಹಜ ಸೊಬಗಿದೆ. ದ್ವಿಪದಿ ಅಥವಾ ಚೌಪದಿಯ ಘಟಕಗಳಲ್ಲಿ ವಿಚಾರಗಳನ್ನು ಹೊಂದಿಸುವ ಕವಿ ಅಂತ್ಯ ಪ್ರಾಸವನ್ನು ಬಹುಮಟ್ಟಿಗೆ ಪಾಲಿಸಿಕೊಂಡು ಬಂದಿದ್ದಾರೆ. ಹೆಚ್ಚಿನ ಕವನಗಳಲ್ಲಿ ಉತ್ತರಕನ್ನಡ ಜಿಲ್ಲೆ ಹಾಗೂ ನಾಡು-ನುಡಿಯ ಅಭಿಮಾನ ಪ್ರಕಟವಾಗಿದೆ.

ಕಾವ್ಯೋದ್ಯೋಗದ ಕಷ್ಟಗಳನ್ನು 'ತೆರಿಗೆ ಅಧಿಕಾರಿಗಳಿಗೆ ಕವಿಗಳ ಮನವಿ' ಯಲ್ಲಿ ತೋಡಿಕೊಳ್ಳುತ್ತ ದೇಸಾಯಿ ಹೇಳುತ್ತಾರೆ.

ಒಂದು ಬಂಗಾಲಿ ಮಣದಷ್ಟು ಕವಿ ಬರೆದರೂ/ಬಂಗಾರವೆನ್ನುವುದು ತೀರ ಕಡಿಮೆ.
ಬೆಳ್ಳಿಯೂ ಅತ್ಯಲ್ಪ, ಹಿತ್ತಾಳೆಯೋ ಹೆಚ್ಚು/ಲಾಭದಾಯಕವಲ್ಲನಮ್ಮ ದುಡಿಮೆ.

ವಿಮರ್ಶಕನು ಕಾವ್ಯಕ್ಕೆ ಕಟ್ಟುವ ಬೆಲೆಯೂ ಕಾಲದಿಂದ ಕಾಲಕ್ಕೆ ಬದಲಾಗಬಹುದು. ಕಾವ್ಯಧರ್ಮ ಗೌಣವಾಗಿದ್ದರೂ ಯುಗಧರ್ಮದ ಕಾವಿನಲ್ಲಿ ಆಕಾರ ಪಡೆದ ಕಾವ್ಯದ ಅಸ್ತಿತ್ವವನ್ನು ಕಡೆಗಣಿಸಲಾಗುವುದಿಲ್ಲ. ಅಷ್ಟೇಕೆ, ಯುಗಮಾನದ ಶಿಷ್ಟ ಮನೋಧರ್ಮಕ್ಕೆ ಬದ್ಧವಾದ ಕಾವ್ಯ ಆ ಕಾರಣದಿಂದಲೇ ಬಹುಕಾಲ ಉಳಿದೀತು. ದೇಸಾಯಿಯವರ ಕವನಗಳನ್ನು ಈ ನಿಟ್ಟಿನಿಂದ ನೋಡಬೇಕು.

'ದಾಸಾಳ'ದ ಬಹುತೇಕ ಕವನಗಳು ೧೯೬೪ ರ ವೇಳೆಗೇ ರಚಿತವಾದವುಗಳು. ಆದರೆ ಪ್ರಕಟವಾದದ್ದು ೧೯೮೩ ರಲ್ಲಿ.

* ಮಹಾದೇವ ಹೆಗಡೆ ಮುತ್ತಳ್ಳಿ ಅವರ ಎರಡು ಕವನ ಸಂಕಲನಗಳು ಬಂದಿವೆ. ಈ "ಯೋಚ್ನೆ" ಹಾಗೂ "ಹೊತ್ಮೂಡ್ತು ಮುಡ್ನಲ್ಲಿ" ಎರಡೂ ಹವ್ಯಕ ಜನಾಂಗದ ಮನೆಮಾತಿನಲ್ಲಿದೆ. ಒಂದು ಭಾಷೆಗೆ ತನ್ನದೇ ಆದ ಪ್ರಾದೇಶಿಕ ಭೇದಗಳಿರುವುದು, ಮತ್ತು ಅದು ಇತರ ಪ್ರದೇಶಗಳ ಜನರಿಗೆ ಅರ್ಥಮಾಡಿಕೊಳ್ಳಲು ಕಷ್ಟವಾಗುವುದು ಸಹಜ. ಉತ್ತರ ಕರ್ನಾಟಕದ ಜನರಿಗೆ ಆಡುಭಾಷೆ ಮತ್ತು ಸಾಹಿತ್ಯದ ಭಾಷೆ ಒಂದೇ ಆಗಿರುವ ಹಾಗೆ ಬೇರೆ ಪ್ರದೇಶಗಳ ಜನರಿಗೆ ಅಲ್ಲ. ಹೀಗಿದ್ದರೂ ಅಲ್ಲಲ್ಲಿ ಆಗಾಗ ಪ್ರಾದೇಶಿಕ ಕಾರಣಗಳಿಂದಾಗಿ ಭಿನ್ನವಾಗಿ ನಿಲ್ಲುವ ಭಾಷೆಯನ್ನು ಸಾಹಿತ್ಯಕ್ಕಾಗಿ ದುಡಿಸಿಕೊಳ್ಳುವ ಪ್ರಯತ್ನ ನಡೆಯುತ್ತಲೇ ಇದೆ. ವೈವಿಧ್ಯಕ್ಕಾಗಿಯೋ ನಾವಿನ್ಯಕ್ಕಾಗಿಯೋ ಬಳಕೆಯಾಗುತ್ತಿದ್ದ ಇಂಥ ಆಡು ಭಾಷೆಯನ್ನು ಅನುಭವದ ಸಶಕ್ತ ಪ್ರಕಟಣೆಗೆ ಅತ್ಯಗತ್ಯವೆಂದು ತಿಳಿದು ಬಳಸತೊಡಗಿದ್ದು ಈಚೆಗೇ. ವಿರ್ಜಿ ಅಣ್ಣಾರಾಯರು, ರಾಜರತ್ನಂ-ಅವರಿಂದ ಹಿಡಿದು ತೀರ ಇತ್ತೀಚಿನ ದೇವನೂರರ ಸಾಹಿತ್ಯದವರೆಗೆ ಆಡುಮಾತಿನ ಪ್ರಮಾಣ ಹಾಗೂ ಕಸುವಿನಲ್ಲಿನ ವ್ಯತ್ಯಾಸದೊಂದಿಗೆ ಪ್ರಯೋಗಗಳು ನಡೆದಿವೆ. ಅಪರಿಚಿತ-ದುರೂಹ್ಯವೆಂಬ ಟಿಪ್ಪಣಿಯಾಚೆಗೆ ಸಾಧ್ಯತೆ. ಗಳನ್ನು ದುಡಿಸಿಕೊಳ್ಳುವಲ್ಲಿ ಇಂಥ ಪ್ರಯೋಗಗಳ ಯಶಸ್ಸನ್ನು ಪರಿಶೀಲಿಸಬೇಕಾಗಿದೆ

ಹಾಗೆ ನೋಡಿದರೆ ಹೈಗನ್ನಡದ ಬಳಕೆ ಕನ್ನಡಕ್ಕೆ ಹೊಸದಲ್ಲ. ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ನಾಟಕವೆಂದು ಗುರುತಿಸಲಾದ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಹವ್ಯಕರ ಮನೆಮಾತಿನಲ್ಲಿದೆ. ಅನಂತರ ಹವ್ಯಕ ಆಡುಮಾತನ್ನು

ಕಾವ್ಯದಲ್ಲಿ ಬಳಸಿಕೊಳ್ಳುವ ವಿರಳ ಪ್ರಯತ್ನಗಳು ನಡೆದಿದ್ದರೂ, ಹೀಗೆ ಸಂಕಲನಗಳನ್ನು ಪ್ರಕಟಿಸಿದವರು ಬಹುಶಃ ಹೆಚ್ಚು ಜನರಿಲ್ಲ. ( ಮಹಾದೇವ ಹಗಡೆಯವರ ಸಂಕಲನಗಳನ್ನು ಬಿಟ್ಟರೆ ಪ್ರಕಟಗೊಂಡ ಸಂಗ್ರಹಗಳು ಇರುವುದು ನನಗೆ ತಿಳಿಯದು) ಈ ದೃಷ್ಟಿಯಿಂದ 'ಯೋಚ್ನೆ' ಈ ಬಗೆಯ ವಿಶಿಷ್ಟ ಸಂಗ್ರಹ.

'ಹೀಗಿದ್ದು ಯನ್ಮಾಣಿ ಪದ್ಯ'ಎಂಬ ಮುನ್ನುಡಿಯಲ್ಲಿ ಗೌರೀಶ ಕಾಯ್ಕಿಣಿಯವರು ಈ ಸಂಕಲನದ ಕವನಗಳಲ್ಲಿ ಇಡುಗಿದ ಹವ್ಯಕ ಸಂಸ್ಕೃತಿಯ ಕಂಪನ್ನು ಕೌಟುಂಬಿಕ ಪರಿಸರವನ್ನು, ಜನಪದ ಸತ್ವವನ್ನು, ಆಡುನುಡಿಯಲ್ಲಿ ಹೊಮ್ಮಿದ ರೂಪಕ' ಪ್ರತಿಮೆಗಳನ್ನು ಗುರುತಿಸಿದ್ದಾರೆ. ಇವುಗಳ ಜೊತೆಗೆ ಆಧುನಿಕತೆಯ ಆಕ್ರಮಣದಿಂದ ಎರಡು ತಲೆಮಾರುಗಳ ನಡುವೆ ಉಂಟಾಗುವ ಸಾಂಸ್ಕೃತಿಕ ಬಿರುಕು 'ಮಾಣಿ ಹೇಳಿದ್ದು' 'ಯಮ್ಮನೆ ಮಾಣಿ ವಿಷ್ಯ' 'ಆ ಕಾಲದಲ್ಲಿ-ಈ ಕಾಲದಲ್ಲಿ' ಮುಂತಾದ ಕವನಗಳಲ್ಲಿದೆ. ರತ್ನನ ಪದಗಳ ಗಾಳಿ ಹೆಗಡೆಯವರ ಕವನಗಳ ಮೇಲೆ ಬೀಸಿದೆಯೆನ್ನಲು 'ಇವ್ಳ' 'ತಿಳ್ಕೋಮಾಣಿ' ಮುಂತಾದ ಕವನಗಳ ಶಿಲ್ಪದಲ್ಲಿ ಗಮನಿಸಬಹುದು. ಹಾಗೆಯೇ 'ಮಲ್ಲಿ' 'ಪುಟ್ನಂಜಿ' ಯರಂತೆ ಈ ಸಂಕಲನದ 'ಪಾತಿ' ಕಾಣಿಸಿಕೊಂಡಿರುವುದನ್ನು ಗಮನಿಸಬಹುದು. ಆದರೆ ಮಹಾದೇವ ಹೆಗಡೆಯವರ ಕಾವ್ಯದ ಭಾಷೆಯಲ್ಲಿ ಕೃತ್ರಿಮತೆಯಿಲ್ಲ. ಯಾರದೇ ನೇರ ಅನುಕರಣೆಯೂ ಇಲ್ಲ. ಮನುಷ್ಯ ಸಂಬಂಧಗಳ ಮೂಲಕ ಬದುಕನ್ನು ಬಗೆವ ಯತ್ನ ಇಲ್ಲಿ ಯಶಸ್ವಿಯಾಗಿದೆ.

'ಹೊತ್ಮೂಡ್ತು ಮೂಡ್ಲಲ್ಲಿ' ಮತ್ತು ವಿಶಾಲ ನೆಲೆಯಲ್ಲಿ ಜೀವನವನ್ನು ಅರ್ಥೈಸುವ-ವ್ಯಾಖ್ಯಾನಿಸುವ ಪ್ರಯತ್ನ. ಹಿಂದಿನ ಸಂಕಲನಕ್ಕಿಂತ ಪ್ರಯೋಗಶೀಲತೆ ಇಲ್ಲಿ ಎದ್ದು ಕಾಣುತ್ತದೆ. ಆಡುಮಾತಿನ ಜೊತೆ ಗ್ರಾಂಥಿಕ ಭಾಷೆಯ ಹೊಂದಾಣಿಕೆಯಿಂದಾಗಿ 'ಯೋಚ್ನೆ' ಸಂಕಲನಕ್ಕಿಂತ ತುಸು ಪರಿಷ್ಕೃತ ಭಾಷೆ ಇಲ್ಲಿನ ಹೆಚ್ಚಿನ ಕವನಗಳಲ್ಲಿವೆ ವಿಶೇಷವಾಗಿ ಮಾನವೀಯ ಮೌಲ್ಯಗಳ ಕುರಿತು ತುಡಿತ, ಆರೋಗ್ಯಕರ ಜೀವನದ ಕಾಳಜಿ, ಪರಿಶುದ್ಧ ಅಂತಃಕರಣ ಇಲ್ಲಿನ ಕವನಗಳ ಸೆಲೆ.

ಮಾದರಿಗಾಗಿ ನಾಲ್ಕು ಸಾಲು : ತೊಟ್ಲಲ್ಲಿ ಕವ್ಚಿಡ್ದ ಕಂಬ್ಳಿ, ದಿಂಬು, ಚಿಂದೀಬಟ್ಟೆ/ತಗ್ಣೆ, ನುಶಿ, ಚಿಕ್ಕಾಡುಕಚ್ಚಿ. ಮೈದಡದಡಸ್ಲ್ಲ/ ತ್ರಾಸಾದ್ರೂ ಗೋರೇತಿದ್ದೆ ಅಬ್ಬೆ ಲಾಲಿ ಕೇಳಿ/ನಗ್ತಿದ್ದೆ ತಾಗ್ದಾಗೆಲ್ಲ ಪ್ರೀತೀಲಿ ಅಬ್ಬೆ ನೊಸ್ಲ್ಲ ( ಚಿಂತನೆ )

* ಕೋಟೆಮನೆ ರಾಮಚಂದ್ರ ಬರೆದ 'ಸುಳಿಯ ಸೀಮೆಯ ಸನಿಹದಿಂದ' ಗೋಪಾಲಕೃಷ್ಣ ಅಡಿಗರ ಮುನ್ನುಡಿಯೊಂದಿಗೆ ಪ್ರಕಟವಾದ ಕೃತಿ. ಮೊದಲಮಾತಿನಲ್ಲಿ ಕವಿ ಸ್ವಯಂತನ್ನ ಮಿತಿಯನ್ನು ಗುರುತಿಸಿಕೊಳ್ಳುವ ವಿನಯವಿದ್ದರೆ ಮುನ್ನುಡಿಯಲ್ಲಿ ವ್ಯಕ್ತಿತ್ವ ವಿಶಿಷ್ಟತೆಯ ಸಿದ್ಧಿಯ ಹಾರೈಕೆಯಿದೆ.

ರಾಮಚಂದ್ರ ಅವರಿಗೆ ಭಾಷೆಯ ಮೇಲೆ ಹಿಡಿತವಿದೆಯಾದ್ದರಿಂದಲೇ ಕವನದ ಬಂಧದಲ್ಲಿ ಬಿಗಿಯಿದೆ. ಭಾಷೆಯ ದುಡಿತದ ಸಾಧ್ಯತೆಗಳನ್ನು ಬಳಸಿಕೊಳ್ಳುವ ಪೂರ್ಣ ಪ್ರಯತ್ನವಿದೆ. ಮತ್ತು ಇಂಥ ಪ್ರಯತ್ನವೇ ತುಸು ಅತಿರೇಕಕ್ಕೆ ದಾರಿ ಮಾಡಿಕೊಟ್ಟಂತಿದೆ.

೧) ತೀರದಲ್ಲೂ ತೀರದಾಸೆಯಿಂದ/ಹೇಳತೀರದ ತುಮುಲ ೨) ಗುಡಿ ಗುಡಿ ಸಲು ಬಿಡದೇ ಗುಡಿಸುವ/ಬುಡುಬುಡಿಕೆ ! ೩) ದುಡುಕು ಸಿಡುಕು ಕೆಡುಕೆನಿಸಿದರೂ/ನಡೆದಿದೆ ಮಿಡಿತೆ ಮಿಡಿತವನುದಿನ ೪) ಬೆಳಕು, ಥಳಕು, ಕೊಳಕು, ಬಳುಕುಗಳಿಗೆ/ನಿರೂಪ ಕತ್ತಲೆಗೂ ರೂಪ.

ಕವಿ ರಾಮಚಂದ್ರ ಅವರಿಗೆ ಸ್ವಂತಿಕೆಯ, ಸ್ವತಂತ್ರ ನಿಲುವಿನ ಹಂಬಲ. ಅವರದು ಸ್ವೋಪಜ್ಞತೆಯ ಗುರಿ. 'ನಿಲುವು' 'ಪೂಲೆಯ ಮಂದಿ' 'ದಾರಿಯಲಿ ಕಂಡ ಪರಿ' ಮುಂತಾದ ಕವನಗಳಲ್ಲಿ ಖಾಸ್ ದಾರಿಯನ್ನು ಹುಡುಕಿಕೊಳ್ಳುವ ಹುಡುಕಾಟವಿದೆ. ಸಂಕಲನದ ಕೊನೆಯಲ್ಲಿ ಜೆ. ಪಿ, ಬೇಂದ್ರೆ, ದೀನದಯಾಳರ ಕುರಿತ ಗೇಯಲಯದ ಶೋಕಗೀತೆಗಳಲ್ಲಿ ಸಂಗ್ರಹಶಕ್ತಿ-ಸುಂದರ ಅಭಿವ್ಯಕ್ತಿ ಎದ್ದು ತೋರುತ್ತದೆ. 'ತುಣುಕುಗಳು' ಚನ್ನಾಗಿವೆ. 'ಬುದ್ಧಿಜೀವಿಯ ಕರ್ಮಕತೆ' ಯಂತಹ ಕವನಗಳ ವಿಡಂಬನೆಯಲ್ಲಿ ಅಲಗಿವೆ. ಭಾಷೆ ಮತ್ತು ಬಂಧಗಳೆರಡರಲ್ಲೂ ಪ್ರಯೋಗಶೀಲತೆಯ ವೈವಿಧ್ಯವಿದೆ-ಒಟ್ಟಾರೆ ಕವನಗಳಲ್ಲಿ.

* ತರುಣ ಕವಿ ಪ್ರಕಾಶ ಕಡಮೆ ಅವರ 'ಗಾಣದೆತ್ತು ಮತ್ತು ತೆಂಗಿನ ಮರ' ಸಂಕಲನಕ್ಕೆ ಮುನ್ನುಡಿ ಬರೆದ ಸು. ರಂ. ಎಕ್ಕುಂಡಿಯವರು ಪ್ರಕಾಶರಲ್ಲಿರುವ ಬಂಡಾಯದ ದನಿಯನ್ನು ಗುರುತಿಸಿದ್ದಾರೆ. ಹೊರಗಿನ ಶಾಂತ-ಸುಂದರ ನಿಸರ್ಗದ ಗರ್ಭದಲ್ಲೇ ಕುದಿಯುವ ಲಾವಾರಸದ ಜ್ವಾಲಾಮುಖಿಯಾಗಿ ಸ್ಫೋಟಿಸುವಂತೆ ಇರುವ ಇವರ ಕವನಗಳಲ್ಲಿನ ಬಿರುಸನ್ನು ಗುರುತಿಸುತ್ತ, ಕಾವ್ಯೋದ್ಯೋಗದ ಅಧ್ಯಯನದ ಅವಶ್ಯಕತೆ, ಗದ್ಯದ ಶುಷ್ಕತೆ ಕಾವ್ಯವನ್ನು ಆವರಿಸದಂತೆ ನೋಡಿಕೊಳ್ಳುವ ಅಗತ್ಯತೆ ಕುರಿತು ಹೇಳಿದ್ದಾರೆ. 'ನಾನೇನೂ ಮಹಾಕವಿಯಲ್ಲ' ಎಂದು ವಿನಯದಿಂದ ನಿವೇದಿಸಿಕೊಂಡ ಪ್ರಕಾಶ್ ಕಡಮೆಯವರ ಕವನಗಳಲ್ಲಿ ಅನುಭವದ ಸರಳೀಕರಣವಿದ್ದರೂ, ಮುಂದಿನ ಸಂಕಲನಗಳಲ್ಲಿ ಗುಣಾತ್ಮಕ ಬೆಳವಣಿಗೆಯನ್ನು ನಿರೀಕ್ಷಿಸಬಹುದಾಗಿದೆ.

[ **ಮುಂದಿನ ಸಂಚಿಕೆಯಲ್ಲಿ :** ಟಿ. ಜಿ. ಭಟ್ಟ, ಹಾಸಣಗಿ, ವನರಾಗಶರ್ಮ, ಶ್ರೀವಿಷ್ಣುನಾಯ್ಕ, ಅರವಿಂದ ನಾಡಕರ್ಣಿ, ಶಾಂತಾರಾಮ ಬಾಳೇಗುಳಿ, ರಾಮಕೃಷ್ಣ ಗುಂದಿ, ಅಳಗುಂಡಿ ಅಂದಾನಯ್ಯ, ಎಚ್. ಆರ್. ಅಮರನಾಥ, ನರಶಿಂಹ ಪರಾಂಜಪೆ, ಬಿ. ಎಚ್. ಶ್ರೀಧರ, ನಜೀರ್ ಚಂದಾವರ, ರಾಜೀವ ಅಜ್ಜೀಬಾಳ, ಭಾಗೀರತಿ ಹೆಗಡೆ, ಸುಧಾಶರ್ಮ ಚವತ್ತಿ, ರವೀಂದ್ರಭಟ್ಟ ಬಳಗುಳಿ ಮುಂತಾದ ಇನ್ನೂ ಹತ್ತಾರು ಕವಿಗಳ ಕಾವ್ಯ ಒಳನೋಟ. ]

# ಕನ್ನಡದ ಭಾಗ್ಯ – ಕಿಟ್ಟೆಲ್ ನಿಘಂಟು

– ಗುಬ್ಬಿ ರೇವಣಾರಾಧ್ಯ

ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತದ ಕಾಲದಲ್ಲಿ ಕನ್ನಡ ನಾಡು ನುಡಿಗೆ, ವಿದೇಶೀಯರಿಂದ ಅಪಾರಸೇವೆ ಸಂದಿರುವುದು ಈಗ ಇತಿಹಾಸ. ಅದರಲ್ಲೂ, ಕ್ರೈಸ್ತ ಧರ್ಮ ಪ್ರಚಾರಕ್ಕೆಂದು ಇಲ್ಲಿಗೆ ಬಂದು ಇಲ್ಲಿಯ ಭಾಷೆಯನ್ನು ಕಲಿತು, ಇಲ್ಲಿಯ ಸಂಸ್ಕೃತಿಯನ್ನು ಮೆಚ್ಚಿ, ತಮ್ಮ ಕೈಲಾದ ಕಾಣಿಕೆಯನ್ನು, ಅನೇಕ ವಿದೇಶೀ ಕ್ರೈಸ್ತ ಮಿಷನರಿಗಳು ಸಲ್ಲಿಸಿವೆ. ಇದರಲ್ಲಿ ಅಗ್ರಗಣ್ಯರೂ, ಪ್ರಾತಃಸ್ಮರಣೀಯರೂ ಆದವರೆಂದರೆ ರೆ|| ಫರ್ಡಿನೆಂಡ್ ಕಿಟ್ಟೆಲ್.

ಫರ್ಡಿನೆಂಡ್ ಕಿಟ್ಟೆಲ್ಲರು ಜರ್ಮನಿಯ ಓಸ್ಟ್‌ಫ್ರೈಸ್ ಲ್ಯಾಂಡಿನ ರೋಸ್ಟರ್ ಹೇಫ್ ಎಂಬಲ್ಲಿ, ೧೮೩೨ರ ಏಪ್ರಿಲ್ ೭ನೇ ತಾರೀಕಿನಂದು ಜನಿಸಿದರು. ಇವರ ತಂದೆ ಒಬ್ಬ ಕ್ರೈಸ್ತ ಧರ್ಮಾಧಿಕಾರಿಯಾಗಿದ್ದರು. ಕಿಟ್ಟೆಲ್ಲರು ತಮ್ಮ ತಂದೆ ಪ್ಯಾಸ್ಟರ್ ಅವರ ಮಾರ್ಗದರ್ಶನದಲ್ಲಿ, ಧಾರ್ಮಿಕ ಸಾಹಿತ್ಯದ ಅಧ್ಯಯನ ಮಾಡಿದರು ಹೈಸ್ಕೂಲ್ ವಿದ್ಯಾ

---

## ನಿಘಂಟು ರಚನೆ

ಸುಮಾರು ಸಾವಿರ ವರ್ಷಗಳ ಹಿಂದೆಯೇ ಕನ್ನಡದಲ್ಲಿ ನಿಘಂಟು ರಚನೆ ಆರಂಭವಾಯಿತು. ರನ್ನ ಕವಿ ರಚಿಸಿದ ಈ ನಿಘಂಟಿನ ಹೆಸರು 'ರನ್ನ ಕಂದ' ಇದರ ಕೆಲವು ಭಾಗಗಳು ಮಾತ್ರ ದೊರೆತಿವೆ. ಅಲ್ಲಿಂದೀಚೆಗೆ ಕನ್ನಡದಲ್ಲಿ ಆಗಿಂದಾಗ್ಗೆ ಹಲವಾರು ಹಂತಗಳಲ್ಲಿ ಅನೇಕ ನಿಘಂಟುಗಳು ರಚಿತವಾದವು. ಇವುಗಳಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದುವೂ ಉಂಟು. ವೈದ್ಯಿಕೆ ಮುಂತಾದ ವಿಚಾರಗಳಿಗೆ ಸಂಬಂಧಿಸಿದ ನಿಘಂಟುಗಳೂ ಉಂಟು. ಈ ನಿಘಂಟುಗಳಲ್ಲಿ ಕೆಲವು ಸಂಸ್ಕೃತ ನಿಘಂಟುಗಳ ಭಾಷಾಂತರಗಳು.

ಆಧುನಿಕ ಅರ್ಥದಲ್ಲಿ ಕನ್ನಡ ಭಾಷಾ ನಿಘಂಟು ರಚಿತವಾದದ್ದು ೧೮೩೨ರಲ್ಲಿ, ಕ್ರೈಸ್ತ ಪಾದ್ರಿ ರೆವರೆಂಡ್ ರೀವ್ ಇದನ್ನು ಸಿದ್ಧಗೊಳಿಸಿದರು. ಇದರಲ್ಲಿ ಅಕಾರಾದಿ ಕ್ರಮದಲ್ಲಿ ಕನ್ನಡ, ಸಂಸ್ಕೃತ ಪದಗಳನ್ನು ವಿಂಗಡಿಸಿ ಅವಕ್ಕೆ ಇಂಗ್ಲೀಷ್ ಅರ್ಥವನ್ನು ಕೊಟ್ಟಿದೆ. ಡ್ಯಾನಿಯಲ್ ಸ್ಯಾಂಡರ್ಸ್ ೧೮೫೮ರಲ್ಲಿ ರೀವ್ ಅವರ ನಿಘಂಟಿನ ಲೋಪದೋಷಗಳನ್ನು ಸ್ವಲ್ಪ ಮಟ್ಟಿಗೆ ನಿವಾರಿಸಿ ಪರಿಷ್ಕೃತ ಆವೃತ್ತಿ ಹೊರ ತಂದರು.

ಕಿಟ್ಟೆಲ್ ಅವರ ಸುಪ್ರಸಿದ್ಧ ಕನ್ನಡ–ಇಂಗ್ಲೀಷ್ ನಿಘಂಟು ಪ್ರಕಟವಾದದ್ದು ೧೮೯೪ರಲ್ಲಿ. ಕಿಟ್ಟೆಲ್‌ರ ನಿಘಂಟು ರಚಿತವಾದ ಬಳಿಕ ಹಲವಾರು ಕನ್ನಡ ನಿಘಂಟುಗಳು ಪ್ರಕಟವಾಗಿವೆ.

(ಜ್ಞಾನ ಗಂಗೋತ್ರಿ - ಕಿರಿಯರ ವಿಶ್ವಕೋಶ : ಪುಟ ೧೬೨)

ಭ್ಯಾಸದ ನಂತರ, ಜರ್ಮನಿಯ ಬಾಸೆಲ್‌ನ ಕ್ರೈಸ್ತಧಾರ್ಮಿಕ ಶಿಕ್ಷಣ ಶಾಲೆಯಲ್ಲಿ ೧೮೩೦-೩೬ರವರೆಗೂ ಕಲಿತು ರೆವರೆಂಡ್ ಆದರು. ಅದೇ ವರ್ಷ ರೆವರೆಂಡ್ ಆಗಿ ನೇಮಕಗೊಂಡು, ಕ್ರೈಸ್ತ ಧರ್ಮ ಪ್ರಚಾರಕ್ಕೆಂದು, ಭಾರತದಲ್ಲಿ ಬಂದಿಳಿದರು. ತಮ್ಮ ಧರ್ಮ ಪ್ರಚಾರ ಕಾರ್ಯಕ್ಕಾಗಿ ಅವರು ಊರಿಂದೂರಿಗೆ ಸಂಚರಿಸಬೇಕಾಗಿತ್ತು. ಅದಕ್ಕಾಗಿ ಇಲ್ಲಿಯ ಭಾಷೆಯಾದ ಕನ್ನಡವನ್ನು ಕಲಿತರು ಇದರಿಂದ ಅವರಿಗೂ ಮತ್ತು ಕನ್ನಡ ಭಾಷೆಗೂ ಬಹು ದೊಡ್ಡ ಲಾಭವಾಯಿತು. ಮಂಗಳೂರನ್ನು ಕೇಂದ್ರವಾಗಿಟ್ಟುಕೊಂಡು, ಇನ್ನಿತರ ಊರುಗಳಲ್ಲಿ ಧರ್ಮ ಪ್ರಚಾರ ಕಾರ್ಯವನ್ನು ಕೈಗೊಂಡರು. ೧೮೬೦ರಲ್ಲಿ ಮಂಗಳೂರಿನಲ್ಲಿ ಪಾಲಿನ್‌ಐತ್ ಎಂಬಾಕೆಯನ್ನು ಲಗ್ನವಾದರು. ಇಬ್ಬರು ಗಂಡು ಮಕ್ಕಳನ್ನು, ಕಿಟ್ಟೆಲ್ಲರ ಮಡಿಲಿಗೆ ಹಾಕಿದ ಈಕೆ ೧೮೬೪ರಲ್ಲಿ ನಿಧನರಾದರು. ೧೮೬೬ರಲ್ಲಿ ತಮ್ಮ ಮಕ್ಕಳೊಂದಿಗೆ ಯೂರೋಪಿಗೆ ರಜೆಯ ಮೇಲೆ ತೆರಳಿದ ಕಿಟ್ಟೆಲ್ಲರು ಒಂದು ವರ್ಷದಲ್ಲೇ ಭಾರತಕ್ಕೆ ಹಿಂದಿರುಗಿದರು. ಅದೇ ವರ್ಷ ತಮ್ಮ ಮೊದಲ ಪತ್ನಿಯ ಸೋದರಿಯಾದ ಜೂಲಿ ಐತ್ ಎಂಬಾಕೆಯನ್ನು ವಿವಾಹವಾದರು.

ಇಷ್ಟರಲ್ಲಿ ಅವರು ಕನ್ನಡವನ್ನು ಚೆನ್ನಾಗಿ ಕಲಿತು ಪಾಂಡಿತ್ಯವನ್ನು ಗಳಿಸಿದ್ದರು. ಮಂಗಳೂರಿನ ಬಾಸೆಲ್ ಮಿಷನ್ನಿನ ಡಾ|| ಹೆಚ್. ಮೋಗ್ಲಿಂಗ್ ಮತ್ತು ಬ್ರಿಟಿಷ್ ಸರ್ಕಾರದ ಉನ್ನತಾಧಿಕಾರಿಯಾದ ಸರ್ ವಾಲ್ಟರ್ ಇಲಿಯಟ್ ಅವರಿಗೆ, ಕಿಟ್ಟೆಲ್ಲರ ಕನ್ನಡ ಭಾಷಾ ಪಾಂಡಿತ್ಯ ಮತ್ತು ಪ್ರೀತಿ ಗೊತ್ತಾಗಿ, ಇವರನ್ನು ಒಂದು ಕನ್ನಡ-ಇಂಗ್ಲಿಷ್ ಶಬ್ದಕೋಶವನ್ನು ರಚಿಸಲು ಕೇಳಿಕೊಂಡರು. ಇದಕ್ಕೆ ಬ್ರಿಟಿಷ್ ಸರ್ಕಾರದ ಆರ್ಥಿಕ ಸಹಾಯವೂ ದೊರೆಯಿತು. ಕಿಟ್ಟೆಲ್ಲರೇನೋ ಸಂತೋಷದಿಂದ ಒಪ್ಪಿಕೊಂಡು ಕೆಲಸಕ್ಕೆ ತೊಡಗಿದರು. ಆದರೆ ಅಲ್ಪ ಸಮಯದಲ್ಲೇ, ಅವರಿಗೆ ಈ ಕೆಲಸದ ಅಗಾಧತೆ ಅರಿವಿಗೆ ಬಂದು, ತಮ್ಮ ಸಂಪೂರ್ಣ ಸಮಯ ಮತ್ತು ಸಾಮರ್ಥ್ಯವನ್ನು ಕೋಶ ರಚನಾ ಕಾರ್ಯದಲ್ಲಿ ತೊಡಗಿಸಿದರು. ೫೦ಕ್ಕೂ ಹೆಚ್ಚು ಗ್ರಂಥಗಳು ಮತ್ತು ಇತರ ಅವಶ್ಯಕ ಆಕಾರ ಸಾಮಗ್ರಿಯೊಂದಿಗೆ ಜರ್ಮನಿಯ ಎಸ್ಲಿಂಗೆನ್ ಎಂಬಲ್ಲಿಗೆ ೧೮೭೭ರಲ್ಲಿ ತೆರಳಿದರು. ೧೮೭೭ ರಿಂದ ೧೮೮೩ರ ಆರು ವರ್ಷಗಳ ಅವಧಿಯಲ್ಲಿ ತಮ್ಮ ಯೋಜಿತ ನಿಘಂಟಿನ ಮೊದಲ ಹಸ್ತಪ್ರತಿಯನ್ನು ಸಿದ್ಧಪಡಿಸಿ, ಅದೇ ವರ್ಷ ಭಾರತಕ್ಕೆ ಮರಳಿದರು. ಇಲ್ಲಿಯ ಕೆಲವು ವಿದ್ವಾಂಸರ ಸಲಹೆ, ಸಹಕಾರದಿಂದ, ಮೊದಲ ಹಸ್ತಪ್ರತಿಯನ್ನು ಪುನಾರಚಿಸಿ, ಮುದ್ರಣಕ್ಕೆ ಕೊಟ್ಟರು. ಈ ಮರು ರಚನೆಯ ಕಾಲದಲ್ಲಿ ಅವರು ಧಾರವಾಡದಿಂದ ಮಡಿಕೇರಿಯವರೆಗೆ ಸುತ್ತಾಡಬೇಕಾಯಿತು. ಎಡೆಬಿಡದ ತಲೆನೋವು ಮತ್ತು ಕಣ್ಣಿನ ತೊಂದರೆಯಿಂದಾಗಿ ೧೮೯೨ ರಲ್ಲಿ ಮತ್ತೆ ಯೂರೋಪಿಗೆ ತೆರಳಬೇಕಾಯಿತು. ೧೮೯೪ರಲ್ಲಿ ಅವರ ದೀರ್ಘ ಪರಿಶ್ರಮದ ಫಲವಾಗಿ ನಿಘಂಟು ಪ್ರಕಟವಾಯಿತು.

೧೮೩೨ರಲ್ಲಿ ರೆ|| ಡಬ್ಲ್ಯು. ರೀವ್ ಅವರು ರಚಿಸಿದ ಒಂದು ನಿಘಂಟು ಮದ್ರಾಸಿನಿಂದಲೂ ಮತ್ತು ೧೮೫೮ರಲ್ಲಿ ರೆ|| ಡಿ. ಸ್ಯಾಂಡರ್ ಸನ್ ರಚಿಸಿದ ಇನ್ನೂ ಒಂದು ನಿಘಂಟು ಬೆಂಗಳೂರಿನಿಂದಲೂ ಪ್ರಕಟವಾಗಿದ್ದವು. ಆದರೆ ಈ ನಿಘಂಟುಗಳು ಸಂಪೂರ್ಣವಾಗಿದ್ದು, ಅನೇಕ ಕೊರತೆಗಳಿಂದ ಕೂಡಿದ್ದವು.

ಟ್ಯೂಟಿಂಗೆನ್ (ಜರ್ಮನಿ) ವಿಶ್ವವಿದ್ಯಾನಿಲಯವು, ಕಿಟ್ಟೆಲ್ಲರ ಈ ಮಹಾನ್ ಕಾರ್ಯವನ್ನು ಪರಿಗಣಿಸಿ, ಡಾಕ್ಟರ್ ಆಫ್ ಫಿಲಾಸಫಿ ಗೌರವವನ್ನು ಕೊಟ್ಟು ಗೌರವಿಸಿತು. ಬಹುಶಃ ಕನ್ನಡದ ಕೆಲಸಕ್ಕೆ ಸಂದ ಮೊದಲ ಗೌರವ ಡಾಕ್ಟರೇಟ್ ಕಿಟ್ಟೆಲ್ಲರದ್ದೇ ಇರಬೇಕು. ತಮ್ಮ ಅನಾರೋಗ್ಯದ ನಡುವೆಯೂ, ಕಿಟ್ಟೆಲ್ಲರು ಸುಮಾರು ೨೦ ವರ್ಷಗಳ ಹಿಂದೆ ಪ್ರಕಟಿಸಿದ್ದ, ಕನ್ನಡ ಭಾಷೆಯ ವ್ಯಾಕರಣವನ್ನು ಪರಿಷ್ಕರಿಸಿ, ಪ್ರಕಟಿಸಿದರು. ೧೯೦೩ ರ ಡಿಸೆಂಬರ್ ೧೯ರಂದು ನಿಧನ ಹೊಂದುವ ಎರಡು ದಿನ ಮುಂಚೆ ಈ ವ್ಯಾಕರಣ ಪ್ರಕಟಗೊಂಡದ್ದನ್ನು ನೋಡುವ ಭಾಗ್ಯ ಅವರದ್ದಾಯಿತು.

ಕನ್ನಡ-ಇಂಗ್ಲೀಷ್ ಶಾಲಾ ನಿಘಂಟು (೧೮೭೬), ಕನ್ನಡ-ಇಂಗ್ಲೀಷ್ ನಿಘಂಟು (೧೮೯೪), ಕನ್ನಡ ಭಾಷಾ ವ್ಯಾಕರಣ (೧೯೦೩), "ಪರಮಾತ್ಮ ಜ್ಞಾನ" ಎಂಬ ಕನ್ನಡದ ಮೊದಲ ಬೈಬಲ್ ಇತ್ಯಾದಿಯಾಗಿ ಕಿಟ್ಟೆಲ್ಲರ ೧೪ ಗ್ರಂಥಗಳು ಪ್ರಕಟವಾಗಿವೆ. ಅದರಲ್ಲೂ ಪ್ರಮುಖವಾದ ಕೃತಿ ಎಂದರೆ ಕನ್ನಡ-ಇಂಗ್ಲೀಷ್ ನಿಘಂಟು, ಕಿಟ್ಟೆಲ್ಲರ ಹೆಸರನ್ನು ಚಿರ ಸ್ಥಾಯಿಯನ್ನಾಗಿಸಿದೆ. ಇದರ ರಚನೆಯಲ್ಲಿ ಅವರು ತೋರಿಸಿರುವ ಶ್ರದ್ಧೆ, ಅನುಸರಿಸಿರುವ ಶಿಸ್ತು, ಅನನ್ಯವೂ, ಅನುಕರಣೀಯವೂ ಆಗಿದೆ. ಅನೇಕ ಪದಗಳ ಪ್ರಯೋಗಗಳನ್ನಲ್ಲದೆ ಆ ಪದಗಳ ಪ್ರಾದೇಶಿಕ ಭೇದಗಳನ್ನು ತಿಳಿಸಿದ್ದಾರೆ. ಸೋದರ ಭಾಷೆಗಳಲ್ಲಿನ, ಆ ಪದಗಳ ರೂಪವನ್ನೂ ತಿಳಿಸಲಾಗಿದೆ.

ಪ್ರತಿ ಪ್ರಯೋಗಕ್ಕೂ ಉಲ್ಲೇಖವನ್ನು ಕೊಡಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನಂತಹ ಹಿರಿಯ ಸಂಸ್ಥೆ, ಎರಡು ದಶಕಗಳು ಕಳೆದರೂ, ಇನ್ನೂ ಒಂದು ಕನ್ನಡ-ಕನ್ನಡ ನಿಘಂಟನ್ನು ಪೂರ್ಣಗೊಳಿಸಲಾಗಿಲ್ಲ ವೆಂದರೆ, ಕಿಟ್ಟೆಲ್ಲರ ಕಾರ್ಯದ ಅಗಾಧತೆಯನ್ನು ಊಹೆ ಮಾಡಿಕೊಳ್ಳಬಹುದಾಗಿದೆ.

ಕಿಟ್ಟೆಲ್ಲರ ನಿಘಂಟು ಪ್ರಕಟವಾಗಿ ಒಂದು ನೂರು ವರುಷಗಳಾಗಿವೆ. ಮದರಾಸ್ ವಿಶ್ವವಿದ್ಯಾನಿಲಯದವರು ೧೯೬೮ರಲ್ಲಿ ಪ್ರೊ|| ಎಂ. ಮರಿಯಪ್ಪ ಭಟ್ಟರ ನೇತೃತ್ವದಲ್ಲಿ ಕಿಟ್ಟೆಲ್ಲರ ನಿಘಂಟನ್ನು ಪುನಾರಚಿಸಿ, ವಿಸ್ತೃತ ರೂಪದಲ್ಲಿ, ನಾಲ್ಕು ಭಾಗಗಳಲ್ಲಿ ಪ್ರಕಟಗೊಳಿಸಿದ್ದಾರೆ. ಈಗ ಇದರ ಪ್ರತಿಗಳೂ ದೊರೆಯುತ್ತಿಲ್ಲ. ಕನ್ನಡ ಭಾಷೆಯಷ್ಟೇ ಅಲ್ಲದೆ, ಯಾವುದೇ ದ್ರಾವಿಡ ಭಾಷಾ ಅಭ್ಯಾಸಿಯು ಕಿಟ್ಟೆಲ್ಲರ ನಿಘಂಟನ್ನು ಉಪೇಕ್ಷಿಸುವಂತಿಲ್ಲ ಎನ್ನುವುದೇ, ನಿಘಂಟಿನ ಪ್ರಮಾಣ ಬದ್ಧತೆಗೆ ಸಾಕ್ಷಿಯಾಗಿದೆ. *

## ಹಣತೆ ಹಾಗೂ ಬದುಕು

ನೆನಪ ಹಣತೆಯಲ್ಲಿ
ಉರಿದ ಬತ್ತಿಗೆ ಎಣ್ಣೆ ಜೀವ !

ಕುಡಿ ಬೆಳಕ ಮಿಂಚಲ್ಲಿ
ಬದುಕೆಂಬ ಕನಸ ಚಿಗುರು.

ಉರಿದ ಬತ್ತಿ
ಚೆಲ್ಲುವ ಬೆಳಕು
ಎಣ್ಣೆ ಕೊಟ್ಟ ಬದುಕು
ಪಯಣದ ಹೆಜ್ಜೆಗಿಷ್ಟು ಇಂಬು.

ಕತ್ತಲೆ ಸೀಳುವ ಬೆಳಕಿಗೆ
ಸಾಗಿವೆ ಹೆಜ್ಜೆಗಳು ನೂರು ನೆನಪಲ್ಲಿ

ಹೊದ್ದ ಬೆಚ್ಚನೆ ಹೊದಿಕೆಯಲ್ಲಿ
ನಾಳೆಂಬ ಕನಸುಗಳ ಬುತ್ತಿ ಗಂಟು

ಒಗಟಿದು ಬಿಚ್ಚಿದಷ್ಟೂ
ನಿಗೂಢವಿದು ಮುಚ್ಚಿದಷ್ಟೂ
ತೆರೆದಷ್ಟೂ ಕ್ಯಾನವಾಸ್ ವಿನ್ಯಾಸ
ಬದುಕು ಹಾಗೂ ಹಣತೆ.

—ಆರ್. ಜಿ. ಹಳ್ಳಿ ನಾಗರಾಜ್

## ಪುಸ್ತಕ ಸ್ವೀಕಾರ

---

0 **ಗಲ್ಲುಗಳಲ್ಲಿ ಗುಲಾಬಿ** (ಕಾವ್ಯ) : ಪ್ರಹ್ಲಾದ ಅಗಸನಕಟ್ಟೆ, ಪುಟ ೭೨, ಬೆಲೆ ರೂ. ೧೫/- ಪ್ರ: ಹರ್ಷ ಪ್ರಕಾಶನ, ಅಗಸನ ಕಟ್ಟೆ, ದಾವಣಗೆರೆ ತಾ॥

0 **ನೀಲಿ ಮತ್ತಿತರ ನಾಟಕಗಳು** (ನಾಟಕ) : ಸಂಧ್ಯಾ ಎಸ್., ಪುಟ ೧೧೦, ಬೆಲೆ ರೂ. ೩೦/- ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ-ತಾ॥

0 **ಅಂಬೇಡ್ಕರ್ ಮತ್ತು ಸಮಕಾಲೀನತೆ** ( ವಿಚಾರ ಸಾಹಿತ್ಯ ) : ಎಲ್. ಹನುಮಂತಯ್ಯ, ಪುಟ ೯೪, ಬೆಲೆ ರೂ. ೨೦, ಪ್ರ : ವಾಹಿನಿ ಪ್ರಕಾಶನ, ಅರಮನೆ ಗುಟ್ಟಹಳ್ಳಿ, ಬೆಂಗಳೂರು-೩

0 **ಆಷ್ಟಾವಂತ** (ನಾಟಕ) : ಶಿವಮೂರ್ತಿ ನಂದನ ಹೊಸೂರು, ಪುಟ ೭೨, ಬೆಲೆ ರೂ. ೨೦/- ಪ್ರ ; ಯುವನಿಕಾ ಪ್ರಕಾಶನ, ಮಂಜುನಾಥನರಗ, ಬೆಂ-೧೦

0 **ಮಹಾಚೈತ್ರ** (ನಾಟಕ) (ಆರನೇ ಮುದ್ರಣ) : ಎಚ್. ಎಸ್. ಶಿವಪ್ರಕಾಶ್ ಪುಟ ೧೧೨, ಬೆಲೆ ರೂ. ೨೮/– ಪ್ರ : ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೧

0 **ಹೇಮು ಕೂಟ ಮತ್ತು ........... ....** ( ಕಾವ್ಯ ) : ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ, ಪುಟ ೧೪೮, ಬೆಲೆ ರೂ. ೨೦/- ಪ್ರ ; ಸ್ನೇಹಾ ಪ್ರಕಾಶನ, ವಿಜಯನಗರ, ಬೆಂಗಳೂರು-೪೦

0 **ಕತ್ತಲೆಗೆ ಯಾವ ಬಣ್ಣ** (ಕಾವ್ಯ) : ಬಿ. ಎಂ. ಹನೀಫ್, ಪುಟ ೫೬, ಬೆಲೆ ರೂ. ೨೫/-, ಪ್ರ : ಸುಹಾ ಪ್ರಕಾಶನ, ಬೆಳ್ಳಾಯರು, ಹಳೆಯಂಗಡಿ

0 **ವಿಷಾದಯೋಗ** (ಕಾವ್ಯ) : ಸತೀಶ ಕುಲಕರ್ಣಿ, ಪುಟ ೧೦೪, ಬೆಲೆ ರೂ. ೨೫/- ಪ್ರ : ವೈಶಾಖ ಪ್ರಕಾಶನ, ೩೯೫, ೯ನೇ ಮುಖ್ಯ ರಸ್ತೆ, ಹನುಮಂತ ನಗರ, ಬೆಂಗಳೂರು-೧೯ ☎ ೬೨೨೧೪೩

0 **ಸಿಕಾಡ** (ಕಾವ್ಯ) : ಜಿ. ಕೆ. ರವೀಂದ್ರಕುಮಾರ್, ಪುಟ ೧೧೨, ಬೆಲೆ ರೂ. ೩೫/- ಪ್ರ : ಸಂಚಯ, ೨೪/ಡಿ, ೧೭ನೇ ಮುಖ್ಯರಸ್ತೆ, ಮುನೇಶ್ವರ ಬ್ಲಾಕ್ ಜಿ.ಇ.ಎಫ್.–ಅಂಚೆ, ಬೆಂಗಳೂರು–೨೬

0 **ಹೊಲಗೇರಿಯ ರಾಜಕುಮಾರ** (ಕಾದಂಬರಿ) : ಶಿವರುದ್ರ ಕಲ್ಲೋಳಿಕರ, ಪುಟ ೧೯೦, ಬೆಲೆ ರೂ. ೩೦, ಪ್ರ : ಅನಾರ್ಯ ಪ್ರಕಾಶನ, ಧಾರವಾಡ.

ANVESHANE MAG (5) PRB-DECL 127/85-86

# ಅನ್ವೇಷಣೆ ಪ್ರಕಟಣೆಗಳು

೧. ಕ್ರಿಯೆ-ಪ್ರತಿಕ್ರಿಯೆ (ವಿಮರ್ಶೆ) (೨ನೇ ಮುದ್ರಣ) ರೂ. ೪೦
ಡಾ|| ಕೆ. ಕೇಶವಶರ್ಮ

೨. ಸ್ತ್ರೀವಾದಿ ವಿಮರ್ಶೆ (ವಿಮರ್ಶೆ) " " ರೂ. ೧೬

೩ ಅಮೃತಮತಿ ಸ್ವಗತ (ಕಾವ್ಯ) (೨ನೇ ಮುದ್ರಣ) ರೂ. ೨೦
ಎಚ್. ಎಲ್. ಪುಷ್ಪ

೪ ಬಂಡಾಯ ಸಾಹಿತ್ಯ ಮೀಮಾಂಸೆ, (೨ನೇ ಮುದ್ರಣ) ರೂ. ೨೦
ಬರಗೂರು ರಾಮಚಂದ್ರಪ್ಪ

೫ ಬಂಡಾಯ ಹತ್ತು ವರ್ಷ, ಸಂ; ಆರ್. ಜಿ. ಹಳ್ಳಿ ನಾಗರಾಜ್ ರೂ. ೧೬

೬. ಮಂದಿರ-ಮಸೀದಿ ಹಾಗೂ ಕೋಮುವಾದ ಸಂ " " ರೂ. ೨೦

೭. ಅಯೋಧ್ಯೆ : ಬಾಬರ್-ಶ್ರೀರಾಮ (ವೈಚಾರಿಕ) " " ರೂ. ೫

೮. ಬೇರು ಒಣಗಿದ ಪ್ರೀತಿ (ಕಾವ್ಯ) ಬಿ. ಎನ್. ಮಲ್ಲೇಶ್ ರೂ. ೧೨

೯. ಮೊದಲು ಗೊತ್ತಿಲ್ಲಿಲ್ಲ (ಕಾವ್ಯ) ಕೆ. ಎಂ. ಮುನಿಕೃಷ್ಣಪ್ಪ ರೂ. ೯

೧೦. ಯಡೆಕುಂಟೆ ಗೆಣೆಸಾಲು (ಜಾನಪದ/ವಿಮರ್ಶೆ) ರೂ. ೫೦
ಎಸ್. ಜಿ. ಸಿದ್ಧರಾಮಯ್ಯ

೧೧. ಕಿಂಚಿತ್ತು ಪ್ರೀತಿ ಬದುಕು (ಕಾವ್ಯ) ಕೃಷ್ಣಮೂರ್ತಿ ಬಿಳಿಗೆರೆ ರೂ. ೨೦

೧೨. ನೆಲದ ಕುಲ ಪರದೇಸಿ (ಕಾವ್ಯ) ತಿಮ್ಮನಹಳ್ಳಿ ವೇಣುಗೋಪಾಲ್ ರೂ. ೨೦

೧೩. ಅಮೀನಾಳ ಹೆಜ್ಜೆಗಳು (ಕಾವ್ಯ) ಹಮೀದ್ ಮಂಜೇಶ್ವರ ರೂ. ೨೦

೧೪. ಕಡಗೋಲು (ಕಾವ್ಯ) ಆರ್. ಜಿ. ಹಳ್ಳಿ ನಾಗರಾಜ್ ರೂ. ೨೦

೧೫. ಸಮೂಹ ಪ್ರಜ್ಞೆ (ವಿಚಾರ ವಿಮರ್ಶೆ) " " ರೂ. ೨೫

೧೬. ವಿಶ್ವವಿದ್ಯ ವಚನಗಳು (ಕಾವ್ಯ) ಡಾ|| ಸಿ. ಎನ್. ಶ್ರೀನಾಥ್ ರೂ. ೧೫

೧೭. ಮಳೆನಿಂತ ಮೇಲಿನ ಮರ ಡಾ|| ಎಸ್. ವಿ. ಪ್ರಭಾವತಿ ರೂ. ೨೦

ಸಂಪಾದಕ/ಮುದ್ರಕ : ಆರ್. ಜಿ. ಹಳ್ಳಿ ನಾಗರಾಜ್, ಪ್ರಕಾಶಕರು ಅರುಣ ಯುವ ಲೇಖಕರ ಬಳಗ, ಬೆಂಗಳೂರು, ಅಂಕಿತ ಪ್ರಿಂಟರ್ಸ್, ವಿಜಯನಗರ, ಬೆಂಗಳೂರು-೪೦.